# ಹಂಪಿ ಪರಿಸರದ ಐತಿಹ್ಯಗಳು : ಚಾರಿತ್ರಿಕ ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಎಂ.ಫಿಲ್.
ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಅಭ್ಯರ್ಥಿ
ಅಯ್ಯಾಳಿ ಯರಿಸ್ವಾಮಿ

ಮಾರ್ಗದರ್ಶಕರು
ಡಾ. ಸಿ.ಆರ್. ಗೋವಿಂದರಾಜು
ಪ್ರಾಧ್ಯಾಪಕರು



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೦

853

859A

# ಹಂಪಿ ಪರಿಸರದ ಐತಿಹ್ಯಗಳು : ಚಾರಿತ್ರಿಕ ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಎಂ.ಫಿಲ್.
ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಅಭ್ಯರ್ಥಿ
ಅಯ್ಯಾಳಿ ಯರಿಸ್ವಾಮಿ

ಮಾರ್ಗದರ್ಶಕರು
ಡಾ. ಸಿ.ಆರ್. ಗೋವಿಂದರಾಜು
ಪ್ರಾಧ್ಯಾಪಕರು




ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೦

859

# ಮಾರ್ಗದರ್ಶಕರ ದೃಢೀಕರಣ ಪತ್ರ

ಹಂಪಿ ಪರಿಸರದ ಐತಿಹ್ಯಗಳು : ಚಾರಿತ್ರಿಕ ವಿಶ್ಲೇಷಣೆ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ವಿಭಾಗದ ಎಂ.ಫಿಲ್. ಪದವಿಗಾಗಿ ಅಯ್ಯಾಳಿ ಯರಿಸ್ವಾಮಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೪.೯.೨೦೧೦

(ಡಾ. ಸಿ.ಆರ್. ಗೋವಿಂದರಾಜು)
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಸಂಶೋಧಕರ ಪ್ರಮಾಣ ಪತ್ರ

ಹಂಪಿ ಪರಿಸರದ ಐತಿಹ್ಯಗಳು : ಚಾರಿತ್ರಿಕ ವಿಶ್ಲೇಷಣೆ ಎಂಬ ನಿಬಂಧವನ್ನು ಡಾ. ಸಿ.ಆರ್. ಗೋವಿಂದರಾಜು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಅಯ್ಯಾಳಿ ಯರಿಸ್ವಾಮಿ

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೪|೬|೨೦೧೦.

(ಅಯ್ಯಾಳಿ ಯರಿಸ್ವಾಮಿ)
ಸಂಶೋಧಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ಮಹತ್ವ

---

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ಸ್ವರೂಪ

೧.೪. ಅಧ್ಯಯನದ ಮಹತ್ವ

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ಮಹತ್ತ್ವ

## ೧.೧. ಅಧ್ಯಯನದ ಉದ್ದೇಶ

ನಾಡಿನ ಸಾಂಸ್ಕೃತಿಕ ಪರಂಪರೆಯಲ್ಲಿ 'ಹಂಪಿ'ಗೆ ವಿಶೇಷ ಸ್ಥಾನವಿದೆ. ಮಧ್ಯಕಾಲೀನ ಕರ್ನಾಟಕದ ಎಲ್ಲಾ ಚಲನ-ವಲನಗಳನ್ನು ತನ್ನಲ್ಲಿ ರೂಢಿಸಿಕೊಂಡಿರುವ ಬಗೆಯುನ್ನು ಹಂಪಿಯಲ್ಲಿ ಕಾಣಬಹುದಾಗಿದೆ. 'ಹಂಪಿ' ಎಂದಾಕ್ಷಣ ಅನೇಕ ವಿಷಯಗಳು ಸ್ಮರಣೆಗೆ ಬರುತ್ತವೆ. ನಡುಗನ್ನಡ ಸಾಹಿತ್ಯದಲ್ಲಿ ಹೊಸ ಹಾದಿ ತೆರೆದವರು ಇಲ್ಲಿನ ಹರಿಹರ, ರಾಘವಾಂಕರು. ಅದನ್ನು ಪಟ್ಟು ಹಿಡಿದು ಮುಂದುವರೆಸಿಕೊಂಡು ಹೋದವರು ಪ್ರೌಢದೇವರಾಯನ ಕಾಲದ ವೀರಶೈವ ವಿರಕ್ತರು. ಅಂತೆಯೇ ಕೃಷ್ಣದೇವರಾಯನ ಕಾಲದ ವೈಷ್ಣವ ಕೀರ್ತನಕಾರರು.

ಮಧ್ಯಕಾಲೀನ ಕರ್ನಾಟಕದ ರಾಜಕೀಯ ನೆಲೆಯಲ್ಲಿ ಕಂಪಿಲ ಅರಸು ಮನೆತನ ಗಮನಾರ್ಹ ವಾದುದು. ಇವರ ನಂತರ ಕರ್ನಾಟಕದ ರಾಜಕೀಯ ಚಟುವಟಿಕೆಗಳನ್ನು ನಿಯಂತ್ರಿಸಿದವರು ವಿಜಯನಗರದ ಅರಸರು. ಅಲ್ಲದೆ ಛಿದ್ರಗೊಂಡ ಪಾಳೇಗಾರರು. ವೀರಶೈವ ವಿರಕ್ತರ ಆಂದೋಲನ ಹಾಗೂ ಮಾಧ್ವರ ದಾಸ ಆಂದೋಲನಗಳು ಹುಟ್ಟಿದ್ದು, ಬೆಳೆದದ್ದು ಈ ಪ್ರದೇಶದಲ್ಲಿಯೇ. ಹೀಗೆ ಮಧ್ಯಕಾಲೀನ ಕರ್ನಾಟಕದ ವಿಭಿನ್ನ ಮುಖಗಳ ಇತಿಹಾಸವೆಂದರೇ ಅದು ಹಂಪಿಯ ಇತಿಹಾಸವೇ ಆಗಿದೆ. ಸಾವಿರಾರು ಶಾಸನಗಳು, ಕೆರೆ-ಬಾವಿಗಳು, ದೇವಾಲಯಗಳು, ಪರ್ವತಗಳು, ಮಾಸ್ತಿಗಲ್ಲು, ವೀರಗಲ್ಲುಗಳಂತಹ ಸ್ಮಾರಕಗಳು, ಶಿಲೆಯ ಮೇಲಿನ ಚಿತ್ರಗಳು, ಗುಹಾ ಚಿತ್ರಗಳು, ಕಾವ್ಯಗಳು, ಮೌಖಿಕ ಆಕರಗಳು ಹೇರಳವಾಗಿ ಈ ಪರಿಸರದಲ್ಲಿ ದೊರೆಯುತ್ತವೆ. ಇಂಥ ಅನೇಕ ಅಂಶಗಳು ಸಾಂಸ್ಕೃತಿಕವಾಗಿ ಪ್ರಾಗೈತಿಹಾಸ ಕಾಲದವರೆಗೆ ಕರೆದುಕೊಂಡು ವ್ಯಾಪಿಸಿರುವುದು ಕಂಡುಬರುತ್ತದೆ.

ಪುರಾಣ ಶಿಷ್ಟಪದರ ಐತಿಹ್ಯಗಳಾದರೆ, ಐತಿಹ್ಯ ಜನಪದರ ಪುರಾಣಗಳಾಗಿವೆ. ಈ ಕಾರಣವಾಗಿ ಐತಿಹ್ಯಗಳನ್ನು ಜನಪದ ಗುಂಪಿಗೆ ಸೇರಿಸಿ ಅಧ್ಯಯನ ಮಾಡುವ ಉಪಕ್ರಮಗಳು ನಡೆದಿವೆ. ವಿಶೇಷವೆಂದರೆ ಐತಿಹ್ಯಗಳ ವ್ಯಾಪ್ತಿ ಇಷ್ಟಕ್ಕೆ ಸೀಮಿತವಾಗಿಲ್ಲ. ಇವುಗಳು ವಸ್ತುಸಾಮಾಗ್ರಿ, ಕ್ರಿಯಾಸಾಮಾಗ್ರಿ ಮತ್ತು

ಭಾಷಾಸಾಮಾಗ್ರಿ ನೆಲೆಗಳಲ್ಲಿ ಹುಟ್ಟಿರುವುದುಂಟು. ಅಲ್ಲದೆ ಅವುಗಳನ್ನು ಇಂದಿಗೂ ಹುಟ್ಟುಹಾಕುತ್ತಲೇ ಮುಂದುವರೆದಿರುವುದು ಗಂಭೀರವಾದುದು. ಅಂದರೆ, ಇತಿಹಾಸ ರಚನೆಗೆ ಶಾಸನ, ಸ್ಮಾರಕಗಳು ನೆರವಾದರೆ ಈ ಆಕರಗಳ ಹುಟ್ಟಿನ ಇತಿಹಾಸವನ್ನು ಐತಿಹ್ಯಗಳು ಬಿಚ್ಚಿಡುತ್ತವೆ. ಹೀಗಾಗಿ ಐತಿಹ್ಯಗಳು ಇತಿಹಾಸದ ಆಕರಗಳೂ ಹೌದು. ಆಕರಗಳ ಇತಿಹಾಸವೂ ಹೌದು. ಈ ಕಾರಣವಾಗಿ ಇತಿಹಾಸವನ್ನು ಮತ್ತು ಇತಿಹಾಸಕ್ಕೆ ನೆರವಾಗುವ ಆಕರಗಳ ಇತಿಹಾಸವನ್ನು ಏಕಕಾಲಕ್ಕೆ ಅಧ್ಯಯನಕ್ಕೊಳಪಡಿಸಬಹುದಾದ ವಿಶೇಷತೆ ಐತಿಹ್ಯಗಳಿಗಿರುವುದರಿಂದ ಹಂಪಿಯ ಚರಿತ್ರೆಯನ್ನು ಚಾರಿತ್ರಿಕ ಭಾಗಕ್ಕೆ ನೆರವಾಗಬಹುದಾದದ ಆಕರಗಳ ಭಾಗವಾಗಿ ನೋಡುವ ಉದ್ದೇಶವನ್ನು ಇಲ್ಲಿ ಇರಿಸಿಕೊಳ್ಳಲಾಗಿದೆ. ಐತಿಹ್ಯಗಳಲ್ಲಿ ಅಸತ್ಯ, ಪುರಾಣ ಕಲ್ಪಿತಗಳಿವೆ ಎಂಬ ಭಾವನೆಯಿಂದ ಉಪೇಕ್ಷೆ ಮಾಡುತ್ತಾ ಬಂದಿರುವ ವಿದ್ವಾಂಸರು ಅಲ್ಲಿಯ ಸತ್ಯವನ್ನು ಕಾವ್ಯ, ಶಾಸನ, ಆಚಾರ-ವಿಚಾರಗಳಂತಹ ಅನ್ಯಮೂಲಗಳಿಂದ ಸಮರ್ಥನೆಗೊಳಪಡಿಸಿದಾಗ ಐತಿಹ್ಯಗಳ ಕೃತಾರ್ಥತೆ ಮನವರಿಕೆಯಾಗುತ್ತದೆ ಎಂಬುದರಲ್ಲಿ ಅನುಮಾನ ಇಲ್ಲ.

ಒಂದು ನಿರ್ದಿಷ್ಟ ಪ್ರದೇಶದಲ್ಲಿ ನಡೆದ ರಾಜಪ್ರಭುತ್ವ, ಯಜಮಾನಿಕೆ, ಅಸಹಾಯಕತೆ, ಸ್ಥಳ ಮಹತ್ವ, ಕ್ಷೇತ್ರ ಮಹಿಮೆ, ದಾನ-ದತ್ತಿ ಹೀಗೆ ಹಲವಾರು ಸಂದರ್ಭಗಳು ಆಯಾ ಕಾಲದ ಸಾಮಾಜಿಕ ಜನ-ಜೀವನ ಚಿತ್ರಿಸುವುದನ್ನು ಇಲ್ಲಿ ಐತಿಹ್ಯಗಳು ಪ್ರತಿನಿಧಿಸುತ್ತವೆ ಎಂಬುದನ್ನು ಐತಿಹ್ಯಗಳ ಹಿನ್ನೆಲೆಯಲ್ಲಿ ಗುರುತಿಸುವ ಉದ್ದೇಶವನ್ನೂ ಇಟ್ಟುಕೊಂಡು ಹೊಸ ಮಾದರಿಯಲ್ಲಿ ನಿರೂಪಿಸಬೇಕಾದ ಜರೂರು ಇದೆ.ಇಲ್ಲಿ ಐತಿಹ್ಯಗಳ ಅಧ್ಯಯನವೆಂದರೆ ಒಂದು ಬಗೆಯ ಚಾರಿತ್ರಿಕ ಅಧ್ಯಯನವೇ ಸರಿ. ಮೌಖಿಕ ಸಾಹಿತ್ಯದಿಂದ ಚಾರಿತ್ರಿಕ ಅಧ್ಯಯನವನ್ನು ಈವರೆಗೆ ಗಮನಿಸದೇ ಇರುವ ಮೌಖಿಕ ಪರಂಪರೆಯ ಜಾತಿ, ವೃತ್ತಿ, ವರ್ಗ ಸಮುದಾಯಗಳ ಸಂಸ್ಕೃತಿಯನ್ನು ಪ್ರತಿನಿಧಿಸುವಂತಹ ಐತಿಹ್ಯಗಳನ್ನು ಇಲ್ಲಿ ವಿಶ್ಲೇಷಿಸಿ, ಚರ್ಚಿಸುವುದರ ಮೂಲಕ ಐತಿಹಾಸಿಕ, ಚಾರಿತ್ರಿಕ ನೆಲೆಯಲ್ಲಿ ಐತಿಹ್ಯಗಳು ಇಂದಿನ ಜಾಗತೀಕರಣದಂತಹ ಸಂದರ್ಭದಲ್ಲಿ ಹೇಗೆ ತನ್ನ ಸ್ಥಾನ ಉಳಿಸಿಕೊಂಡಿದೆ ಎಂಬುದನ್ನು ಹೊಸ ಬಗೆಯಲ್ಲಿ ನೋಡುವುದಾಗಿದೆ.

ನಾಡಿನ ಸಂಸ್ಕೃತಿಗೆ ಐತಿಹ್ಯಗಳಂತಹ ಮೌಖಿಕ ಆಕರಗಳು ಸಂಸ್ಕೃತಿಯನ್ನು ಉಳಿಸಿ-ಬೆಳೆಸಿಕೊಂಡಿರುವ ಪರಂಪರೆಗಳಾಗಿ, ಒಂದು ಪ್ರದೇಶದ ಭೌಗೋಳಿಕ, ಸಾಮಾಜಿಕ, ಐತಿಹಾಸಿಕ, ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟುವಾಗ ಕಂಠಸ್ಥ ಪರಂಪರೆಯಿಂದ ದೊರೆಯಬಹುದಾದ ಮೌಖಿಕ ಆಕರಗಳು ಚರಿತ್ರೆಯನ್ನು ನಿರ್ಮಿಸಲು ಐತಿಹ್ಯಗಳು ಹೇಗೆ ನೆರವಾಗಬಲ್ಲವು ಎಂಬುದನ್ನು ವಿಶಿಷ್ಟ ಮಾದರಿಯಲ್ಲಿ ವಿಶ್ಲೇಷಿಸುವ ಉದ್ದೇಶವನ್ನು ಒಳಗೊಂಡಿದೆ. ಆಧಾರ ರಹಿತವಾದ ಮೌಖಿಕ ಸಾಹಿತ್ಯದಿಂದ ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡಲು ಸಾಧ್ಯವೇ? ಎಂಬುದನ್ನು ಇಲ್ಲಿ ಚರ್ಚಿಸಿ ಐತಿಹ್ಯ ಕೇಂದ್ರೀತವಾದ ಉತ್ತರ ಕಂಡುಕೊಳ್ಳುವ ಪ್ರಯತ್ನ ಪ್ರಸ್ತುತ ಅಧ್ಯಯನ ಉದ್ದೇಶಗಳಲ್ಲಿ ಪ್ರಧಾನವಾದುದು.

ಇಲ್ಲಿಯವರೆಗೆ ಐತಿಹ್ಯಗಳ ಅಧ್ಯಯನವೆಂದರೆ ಸಾಂಸ್ಕೃತಿಕ ಅಧ್ಯಯನವೆಂಬುದು ಸರಿಯಷ್ಟೇ. ಆದರೂ ಐತಿಹ್ಯಗಳ ಅಧ್ಯಯನ ಭೌತಿಕ, ಜನಪದರ ಮನೋಧರ್ಮದ ಆಶಯ. ಐತಿಹ್ಯಗಳು ಪ್ರದೇಶದಿಂದ ಪ್ರದೇಶಕ್ಕೆ ಹೇಗೆ ಭಿನ್ನ? ಅವುಗಳ ರಾಜಕೀಯ ತಂತ್ರ ಇಂದು ಜಾನಪದ ಸಾಹಿತ್ಯದಲ್ಲಿ ಐತಿಹ್ಯಗಳು ಪಡೆದುಕೊಂಡ ಸ್ಥಾನದ ಬಗೆಗೆ ಚರ್ಚಿಸಲಾಗುವುದು.

ವಿದೇಶಿ ಬರಹಗಾರರಿಂದ ಖ್ಯಾತಿ ಹೊಂದಿದ ವಿಜಯನಗರ ಸಾಮ್ರಾಜ್ಯ ಪ್ರಾಚೀನತೆ ಮತ್ತು ಸಾಂಸ್ಕೃತಿಕ ಚರಿತ್ರೆಯ ದೃಷ್ಟಿಯಿಂದ ಶ್ರೀಮಂತವಾಗಿದೆ ಎಂಬುದು ನಿಸ್ಸಂದೇಹವಾದ ಮಾತು. ಇಂತಹ ಇತಿಹಾಸ ದಾಖಲೆಗಳ ಜೊತೆಗೆ ಜನಪದ ಇತಿಹಾಸವೊಂದಿದೆ ಎಂಬುದನ್ನು ಮರೆಯಬಾರದು ಏಕೆಂದರೆ, ಮನುಷ್ಯ ಸಂಸ್ಕೃತಿಯು (ಇತಿಹಾಸ) ಮೊದಲು ಮೌಖಿಕವಾಗಿ ಬೆಳೆದಿದ್ದು ನಂತರ ಲಿಖಿತವಾದ ಅಕ್ಷರ ಸಂಸ್ಕೃತಿಯಲ್ಲಿ ಬೆಳೆಯಲಾರಂಭಿಸಿದ್ದು ಗಮನಾರ್ಹ. ಹೀಗಾಗಿ ಮೌಖಿಕ ಪರಂಪರೆಯು ಜನಪದ ಸಾಹಿತ್ಯದಿಂದ ಸಂಸ್ಕೃತಿಯನ್ನು ತಿಳಿಯುವ ಆಶಯ ಅಧ್ಯಯನದ ಸ್ಥೂಲ ವೈಖರಿಯಾಗಿದೆ. ಹಂಪಿ ಪರಿಸರದಲ್ಲಿನ ಲಭ್ಯ ಐತಿಹ್ಯಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿ ಪ್ರಸ್ತುತ ಅಧ್ಯಯನವನ್ನು ಅಂತರ್‌ಶಿಸ್ತೀಯವಾಗಿ ಐತಿಹ್ಯದ ಅರ್ಥ, ಸ್ವರೂಪ, ಹುಟ್ಟು, ಬೆಳವಣಿಗೆ ಮತ್ತು ಪ್ರಕಾರಗಳನ್ನು ಅವುಗಳ ವಿವರಣೆಯನ್ನು ನೀಡಿ, ವಿಶ್ಲೇಷಿಸುವುದನ್ನು ಒಳಗೊಂಡು ಹಂಪಿ ಪರಿಸರವನ್ನು ಕೇಂದ್ರವಾಗಿಟ್ಟುಕೊಂಡು ಐತಿಹ್ಯಗಳ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನಕ್ಕೆ ಐತಿಹಾಸಿಕ ಹಂಪಿ ಪರಿಸರವನ್ನು ಮತ್ತು ಅದರ ಚಾರಿತ್ರಿಕ ಇತಿಹಾಸವನ್ನು ಕಾರ್ಯಕ್ಷೇತ್ರವಾಗಿ ಆರಿಸಿಕೊಳ್ಳಲಾಗಿದೆ. ಇಲ್ಲಿ ಲಿಖಿತ ಸಾಮಾಗ್ರಿಗಳು ಮತ್ತು ಕಂಠಸ್ಥ ಪರಂಪರೆಯ (ಮೌಖಿಕ) ಸಾಮಾಗ್ರಿಗಳೂ ಹೆಚ್ಚಾಗಿವೆ. ಇತಿಹಾಸಕ್ಕೆ ಸಂಬಂಧಿಸಿದಂತೆ ಈ ಎರಡೂ ಪರಂಪರೆಗಳು ಹೇಗೆ ಪ್ರತಿಕ್ರಿಯಿಸಿವೆ ಎಂಬುದನ್ನು ಪರಿಶೀಲಿಸುವುದು ಸಹ ಅಧ್ಯಯನದ ಪ್ರಮುಖ ಉದ್ದೇಶ.

## ೧.೩. ಅಧ್ಯಯನದ ಸ್ವರೂಪ

ಹಂಪಿ ಪರಿಸರದ ಐತಿಹ್ಯಗಳಿಗೆ ಸಂಬಂಧಪಟ್ಟಂತೆ ಕ್ಷೇತ್ರಕಾರ್ಯದಲ್ಲಿ ದೊರೆತ ಪ್ರಾಥಮಿಕ ಮತ್ತು ಆನುಷಂಗಿಕ ಹಾಗೂ ಇತರ ಆಕರಗಳನ್ನು ಐತಿಹ್ಯಗಳ ರಚನೆಯಲ್ಲಿ ಬಳಸಿಕೊಳ್ಳಲಾಗುವುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಹಂಪಿಯ ಪರಿಸರದ ಇತಿಹಾಸದ ಬಗೆಗೆ ಹೊಸದಾಗಿ ಏನನ್ನಾದರೂ ಹೇಳಲು ಸಾಧ್ಯವೇ? ಎಂಬುದನ್ನು ಪರಿಶೀಲಿಸಿ ನೋಡುವ ಕಿರುಪ್ರಯತ್ನ ಈ ನಿಬಂಧದಲ್ಲಿದೆ. ಅಲ್ಲದೆ ಈ ಹಿನ್ನೆಲೆಯಲ್ಲಿಯೇ ಒಟ್ಟು ಐದು ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಪರಿಶೀಲಿಸಲಾಗಿದೆ.

ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ಮಹತ್ತ್ವಗಳನ್ನು ಒಳಗೊಂಡಿದೆ.

ಎರಡನೆಯ ಅಧ್ಯಾಯದಲ್ಲಿ ಐತಿಹ್ಯಗಳ ಅರ್ಥ, ಸ್ವರೂಪ, ಹುಟ್ಟು, ಬೆಳವಣಿಗೆ ಮತ್ತು ಪ್ರಕಾರ ಗಳನ್ನು ಕುರಿತು ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಹಂಪಿ ಪರಿಸರದ ಚಾರಿತ್ರಿಕ ಹಿನ್ನೆಲೆ ಕುರಿತ ವಿವರಣೆಯಲ್ಲಿ ಹಂಪಿಯ ಚಾರಿತ್ರಿಕತೆ ಮತ್ತು ಕಿಷ್ಕಿಂಧಾಕ್ಷೇತ್ರದ ಚಾರಿತ್ರಿಕತೆಯನ್ನು ವಿವರಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಹಂಪಿ ಪರಿಸರದ ಐತಿಹ್ಯಗಳ ವರ್ಗೀಕರಣ ಮತ್ತು ವಿಶ್ಲೇಷಣೆಯನ್ನು ಒಳಗೊಂಡಿದೆ. ಇದರಲ್ಲಿ ಹಂಪಿ ಪರಿಸರದ ಐತಿಹ್ಯಗಳ ವರ್ಗೀಕರಣ ಮತ್ತು ವಿಶ್ಲೇಷಣೆಯನ್ನು ಕೂಲಂಕಷವಾಗಿ ಚರ್ಚಿಸಲಾಗಿದೆ.

ನಿಬಂಧದ ಕೊನೆಯ ಅಧ್ಯಾಯ ಸಮಾರೋಪದಲ್ಲಿ ಒಟ್ಟು ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಕೊಡಲು ಪ್ರಯತ್ನಿಸಲಾಗಿದೆ.

### ೧.೪. ಅಧ್ಯಯನದ ಮಹತ್ತ್ವ

ಭಾರತ ಸಂದರ್ಭದಲ್ಲಿ ಮೌಖಿಕ ಸಾಮಾಗ್ರಿಗಳು ನೀಡುವ ಮಾಹಿತಿಗಳು ಅತ್ಯಂತ ಅಮೂಲ್ಯವಾದವು. ಪಾಶ್ಚಾತ್ಯ ಇತಿಹಾಸ ರಚನಾಶಾಸ್ತ್ರಕಾರರು ಲಿಖಿತ ವಿದ್ವತ್ ಪರಂಪರೆಯಿಂದ ಹೊರತಾಗಿರುವುದನ್ನು ತಮ್ಮ ಅಧ್ಯಯನಕ್ಕೆ ಬಳಸಿಕೊಳ್ಳುವುದಿಲ್ಲ. ವಸಾಹತು ಸಂದರ್ಭದಲ್ಲಿ ಆರಂಭ ಗೊಂಡ ಭಾರತದ ಇತಿಹಾಸ ರಚನೆಯಲ್ಲಿಯೂ ಇಂತಹುದೇ ಧೋರಣೆಗಳನ್ನು ಅನುಸರಿಸಲಾಯಿತು. ಇಂಥ ಕಡೆ ಇತಿಹಾಸಕಾರನು ಬರವಣಿಗೆ ರೂಪದಲ್ಲಿರುವ ವಿಚಾರಗಳನ್ನು ಮಾತ್ರ ನಿಜವಾದ ಇತಿಹಾಸವೆಂದು ಪರಿಗಣಿಸುತ್ತಾನೆ.

ಇಲ್ಲಿ ಅಕ್ಷರ ರಾಜಕೀಯವು ಮೌಖಿಕ ಸಾಮಾಗ್ರಿಗಳನ್ನು ಮರೆಗೆ ತಳ್ಳುತ್ತದೆ. ಚರಿತ್ರೆಯ ಬರವಣಿಗೆಯ ಸಂದರ್ಭದಲ್ಲಿ ಕಂಡುಬರುವ ಮೌಖಿಕ ಸಾಮಾಗ್ರಿಗಳ ಗೈರು ಹಾಜರಿಯೇ ಅತ್ಯಂತ ಮುಖ್ಯ ಪ್ರಶ್ನೆಗಳನ್ನು ಎತ್ತುತ್ತದೆ ಮತ್ತು ಕೆಲವು ನಿರ್ಣಯಗಳಿಗೆ ಬರಲು ನಮ್ಮನ್ನು ಒತ್ತಾಯಿಸುತ್ತದೆ. ನಮಗೆಲ್ಲ ತಿಳಿದಿರುವಂತೆ ಇತಿಹಾಸದ ಘಟನೆಗಳೆಲ್ಲವೂ ಲಿಖಿತ ರೂಪದಲ್ಲಿ ದಾಖಲೆಗೊಳ್ಳುವುದಿಲ್ಲ. ಆಳುವ ವರ್ಗ ತನ್ನ ಹಿತಾಸಕ್ತಿ ಮತ್ತು ಅಧಿಕಾರಕ್ಕೆ ಸಂಬಂಧಿಸಿದ ವಿಚಾರಗಳನ್ನು ಹೆಚ್ಚು ಕಾಳಜಿ ವಹಿಸಿ ದಾಖಲಿಸುತ್ತದೆ. ಅಂತಹ ದಾಖಲೆಗಳೇ ಮುಂದೆ ಕಾನೂನುಬದ್ಧಗೊಂಡು ಅಧಿಕೃತಗೊಳ್ಳುತ್ತವೆ. ಇಂತಹ ವಿಚಾರಗಳಿಗಿಂತ ಭಿನ್ನವಾದ ವಿಚಾರ ಸರಣಿಯೊಂದು ಮೌಖಿಕ ರೂಪದಲ್ಲಿ ಜಾಗೃತಗೊಂಡಿರುತ್ತದೆ. ಅಂದರೆ ಜನರ ಸ್ಮರಣೆಯ ಭಾಗವಾಗಿ ಉಳಿದುಕೊಂಡು ಬಂದಿರುವ ವಿಚಾರಗಳು ದಾಖಲಾದ ವಿಚಾರಗಳಿಗಿಂತ ಬೇರೆಯಾಗಿರುತ್ತವೆ. ಅಕ್ಷರ ಮಾಧ್ಯಮ ಯಾವುದನ್ನು ಮಾನ್ಯ ಮಾಡುವುದೋ ಅದಕ್ಕಿಂತ ಭಿನ್ನವಾದುದೊಂದನ್ನು ಅನಕ್ಷರಸ್ಥ ತೋಂಡಿ ಮಾಧ್ಯಮ ಗುರುತಿಸುತ್ತಿರುತ್ತದೆ. ಎಷ್ಟೋ ಬಾರಿ ಎರಡು ಪ್ರವೃತ್ತಿಗಳು ಪರಸ್ಪರ ವಿರೋಧಿ ನೆಲೆಗಳಲ್ಲಿರುತ್ತವೆ. ಒಂದು ಅಕ್ಷರದ ಮೂಲಕ, ಇನ್ನೊಂದು ಬಾಯಿಮಾತಿನ ಮೂಲಕ ಉಳಿಯುವುದೇ ಇದಕ್ಕೆ ಒಳ್ಳೆಯ ಸಾಕ್ಷಿ. ಸಾಮಾನ್ಯವಾಗಿ ಅಕ್ಷರ ರೂಪದಲ್ಲಿ ರುವುದನ್ನು 'ಶಾಶ್ವತ'ವೆಂದೂ, ಬಾಯಿಮಾತಿನಲ್ಲಿರುವುದನ್ನು 'ಅಶಾಶ್ವತ'ವೆಂದು ವಿವರಿಸಲಾಗುತ್ತಿದೆ. ಇದು ಅಕ್ಷರದ ಪರವಾಗಿರುವವರ ತರ್ಕ. ಆದರೆ ವಾಸ್ತವವಾಗಿ ಮೌಖಿಕ ರೂಪದಲ್ಲಿರುವಂತಹದ್ದು ಅಶಾಶ್ವತವೇನೂ ಆಗಿರುವುದಿಲ್ಲ. ಅದು ಕಂಠಸ್ಥ ಪರಂಪರೆಯಲ್ಲಿ ಸ್ಮರಣೆಯ ಒಂದು ಭಾಗವಾಗಿಯೇ ಉಳಿದುಕೊಂಡು ಬಂದಿರುತ್ತದೆ. ಅಂದರೆ ಅಕ್ಷರ ರೂಪದ ಮತ್ತು ಮೌಖಿಕ ರೂಪದ ಎರಡು ಪಠ್ಯಗಳು ನಮ್ಮ ಮಧ್ಯೆಯೇ ಇರುವುದೆಂಬುದು ಸ್ಪಷ್ಟವಾಗುತ್ತಾಯಿತು. ಈ ಎರಡೂ ಪಠ್ಯಗಳೂ ತಮಗೆ ಬೇಕಾದ

ಯುಕ್ತ ಓದುಗನನ್ನು ಅಥವಾ ಕೇಳುಗನನ್ನು ಆಯ್ಕೆ ಮಾಡಿಕೊಂಡಿರುತ್ತವೆ ಮಾತ್ರವಲ್ಲ, ಅವರಿಂದ ಕೆಲವು ಅರ್ಹತೆಗಳನ್ನು ನಿರೀಕ್ಷಿಸುತ್ತಿರುತ್ತವೆ. ಅಂದರೆ ಓದುವ ಅಥವಾ ಕೇಳುವ ಕ್ರಿಯೆಯಲ್ಲಿ ಮಗ್ನನಾದ ವ್ಯಕ್ತಿಯು ತನ್ನನ್ನು ನಿರ್ದಿಷ್ಟ ರೀತಿಯಲ್ಲಿ ವ್ಯಾಖ್ಯಾನಿಸಲು ಅಗತ್ಯವಾದ ಮಾರ್ಗದರ್ಶಕ ಸೂಚನೆಗಳನ್ನು ಪಠ್ಯವು ತನ್ನೊಳಗೇ ಹೆಣೆದುಕೊಂಡಿರುತ್ತದೆ.

ಕಂಠಸ್ಥ ಪರಂಪರೆಯ ವಿವರಗಳನ್ನು ಇತಿಹಾಸ ರಚನೆಗೆ ಬಳಸಿಕೊಳ್ಳುವ ಬಗೆ ಹೇಗೆ? ಈ ಪ್ರಶ್ನೆ ಇತಿಹಾಸದ ಬಗೆಗಿನ ನಮ್ಮ ಪರಿಕಲ್ಪನೆಗಳೊಂದಿಗೂ ಸಂಬಂಧ ಹೊಂದಿದೆ. ಸಾಂಪ್ರದಾಯಿಕ ಇತಿಹಾಸ ಕಾರರು ತಮ್ಮ ಬರವಣಿಗೆಯನ್ನು 'ವಸ್ತುನಿಷ್ಠ' ಎಂದು ಕರೆದುಕೊಳ್ಳುತ್ತಾರೆ. ಇಲ್ಲಿ 'ವಸ್ತುನಿಷ್ಠ' ಎಂಬ ಮಾತು ಕೂಡ ಚರ್ಚಾಸ್ಪದವಾದುದು. ನಮ್ಮ ಸಾಮಾನ್ಯ ಅನುಭವದಲ್ಲಿರುವಂತೆ ಒಂದೇ ಘಟನೆಯನ್ನು ನೋಡಿದ ಇಬ್ಬರೂ ಆ ಘಟನೆಯ ಬಗ್ಗೆ ಬೇರೆಯದೇ ಆದ ವಿವರಣೆಗಳನ್ನು ನಿರೂಪಿಸುತ್ತಾರೆ. ಇದರಲ್ಲಿ ಯಾವುದು ನಿಜ? ಎಂದು ಕೇಳಿದರೆ ಎರಡೂ ನಿಜ ಅಥವಾ ಎರಡೂ ಸುಳ್ಳು ಅಥವಾ ಇಬ್ಬರ ನಿರೂಪಣೆಯಲ್ಲಿಯೂ ಸ್ವಲ್ಪ ಸ್ವಲ್ಪ ಸತ್ಯವಿದೆ ಎಂಬ ಮಾತು ದೊರೆಯುತ್ತದೆ ಅಥವಾ ಬಹಳಷ್ಟು ಪೂರ್ವಾಗ್ರಹಗಳೂ ಇವೆ ಎಂಬುದನ್ನು ತಿಳಿದಿರಲೇಬೇಕು.

ಚರಿತ್ರ ನಿರೂಪಣೆಗಳಲ್ಲಿ ತಮಗೆ ದಕ್ಕಿದ ದಾಖಲೆಗಳನ್ನು ಸಂಗ್ರಹಿಸಿ, ಅವಲೋಕಿಸಿ ಅವುಗಳೊಳಗೆ ಒಂದು ತರ್ಕರೂಪಿಸಿ ಚರಿತ್ರೆಯ ಅರ್ಥವನ್ನು ಕಟ್ಟಲಾಗುತ್ತದೆ. ಇಂತಹ ಕಡೆ ಚರಿತ್ರೆಯ ನಿರೂಪಕ ಭಾವಾತಿರೇಕವಿಲ್ಲದ, ಪಕ್ಷಪಾತವಿಲ್ಲದ ತಟಸ್ಥ ಪರಿಶೋಧಕನಂತೆ, ಪೂರ್ವಾಗ್ರಹಗಳಿಲ್ಲದ ನ್ಯಾಯಾಧೀಶ ನಂತೆ ವರ್ತಿಸುತ್ತಾನೆ. ಆದರೆ ಹೀಗೆ ಮಾಡುವಾಗಲೂ ಅವನ ಬರೆಹ ಕೇವಲ ವರದಿಯಾಗಿರುವುದಿಲ್ಲ. ಬದಲಾಗಿ ಚರಿತ್ರೆಯನ್ನು ನಿರೂಪಿಸಲು ತನಗಿರುವ ಅಧಿಕಾರವನ್ನು ಉಪಯೋಗಿಸಿ ಓದುಗರಲ್ಲಿ ವಸ್ತುನಿಷ್ಠ ಎಂಬ ಭ್ರಮೆಯನ್ನು ಆತ ಮೂಡಿಸುತ್ತಾನೆ. ಚರಿತ್ರಕಾರ ನಿರೂಪಿಸಿದ ನಿರೂಪಣೆಯ ಒಳಗಣ ಆಂತರಿಕ ತರ್ಕವು 'ಚರಿತ್ರೆಯು ಕಟ್ಟುಕಥೆಯಲ್ಲ' ಎಂಬ ಭಾವವನ್ನು ಓದುಗನಲ್ಲಿ ಮೂಡಿಸುತ್ತದೆ.

ನಾವು ಹೇಳುವ ಚರಿತ್ರೆಯು ಜನರಲ್ಲಿ 'ಕತೆ'ಯಾಗಿ ಉಳಿದಿದೆ. ಇಲ್ಲಿ 'ನಿಜವಲ್ಲದ್ದು' ಅಥವಾ 'ಕಾಲ್ಪನಿಕ' ಎಂಬ ಅರ್ಥದಲ್ಲಿ ಜನಪದರು 'ಅಜ್ಜಿ ಕತೆ' ಎಂಬ ಪದ ಬಳಸುತ್ತಾರೆ. ಅಜ್ಜಿ ಕತೆಗೆ 'ನಿಜವಾದ ನಿರೂಪಣೆ' ಎಂಬ ಅರ್ಥವು ಎಲ್ಲಿಯೂ ಇಲ್ಲ. ಯಾರು ಕತೆಯನ್ನು ನಿರೂಪಿಸುತ್ತಾರೋ ಅವರಿಗೆ ಅವರು ನಿರೂಪಿಸುತ್ತಿರುವುದು 'ನಿಜವನ್ನೇ' ಎಂಬ ನಂಬುಗೆ ಇರುತ್ತದೆ. ಆ ನಿರೂಪಕನ ತಿಳುವಳಿಕೆಯ ಪರಿಧಿಯೊಳಗೆ ಅದು 'ನಿಜವೇ' ಆಗಿರುತ್ತದೆ. ಆತನ ಪ್ರಕಾರ ಅವೆಲ್ಲ ಹಿಂದೆ ನಡೆದ ಘಟನೆಗಳೇ ಆಗಿರುತ್ತವೆ. ಜನರು ನಿರೂಪಿಸುವ ಇಂತಹ ಕತೆಗಳಿಗೆ ಇತ್ತೀಚಿನ ದಿನಗಳಲ್ಲಿ ವಿದ್ವಾಂಸರು 'ಐತಿಹ್ಯ' ಎಂಬ ಪದವನ್ನು ಬಳಸಿಕೊಂಡು ಬರುತ್ತಿದ್ದಾರೆ.

ಮೌಖಿಕ ಆಕರಗಳ ಮೂಲಕ ಇತಿಹಾಸವನ್ನು ಪುನರ್‌ರಚನೆ ಮಾಡುವವನು ಮೌಖಿಕ ಮಾಧ್ಯಮದಿಂದ ಅಕ್ಷರ ಮಾಧ್ಯಮಕ್ಕೆ ವಿಷಯಗಳನ್ನು ದಾಟಿಸಬೇಕಾಗುತ್ತದೆ. ಹೀಗೆ ಮಾಡಿದಾಗ ಮೌಖಿಕ ನಿರೂಪಣೆ ಬರಹದ ಮೂಲಕ ಸ್ಥಾವರಗೊಂಡು ಒಂದು ಪಠ್ಯವಾಗಿ ಉಳಿಯುತ್ತದೆ. ಮೌಖಿಕ ಪಠ್ಯಕ್ಕೂ,

ಅಕ್ಷರದ ಮೂಲಕ ದಾಖಲಾದ ಪಠ್ಯಕ್ಕೂ ಇರುವ ಸಂಬಂಧ ಯಾವ ಬಗೆಯದು? ಮೇಲ್ನೋಟಕ್ಕೆ ನೇರಸಂಬಂಧವಿರುವಂತೆ ತೋರುತ್ತದೆ. ಆದರೆ ಆಳವಾಗಿ ನೋಡಿದಾಗ ಅವೆರಡರ ಮಧ್ಯೆ ಸಾಕಷ್ಟು ವ್ಯತ್ಯಾಸವಿರುವುದು ಕಂಡುಬರುತ್ತದೆ.

ಮೌಖಿಕ ನಿರೂಪಣೆಯ ಅನೇಕ ಸೂಕ್ಷ್ಮ ಲಕ್ಷಣಗಳು (ಹಾವ-ಭಾವ, ಮುಖ ಲಕ್ಷಣ, ಧ್ವನಿಯ ಏರಿಳಿತ, ಸಂಭಾಷಣೆ (ನಿರೂಪಣೆ) ಇತ್ಯಾದಿ) ಭಾಷಿಕ ರೂಪ ತಳೆದಾಗ ಮಾಯವಾಗಿ ಬಿಡುತ್ತವೆ. ಹಾಗೆಯೇ ಸಂಭಾಷಣೆಯ ರೂಪದಲ್ಲಿರುವ ಭಾಷೆ ಮೌಖಿಕ ರೂಪಕ್ಕೆ ಬಂದಾಗ ನಿರ್ದೇಶನ ಸ್ವರೂಪವನ್ನು ಪಡೆದುಕೊಂಡು ಬಿಡುತ್ತದೆ. ಹೇಳುಗ, ಕೇಳುಗರ ಪರಸ್ಪರ ಸಾನಿಧ್ಯ, ಸುತ್ತಮುತ್ತಲಿನ ಆಗು-ಹೋಗುಗಳು, ದೃಶ್ಯ ವಾತಾವರಣ, ಇವೆಲ್ಲ ಲಿಖಿತ ರೂಪದಲ್ಲಿ ಕಾಣೆಯಾಗುತ್ತವೆ. ಕೇವಲ ಪದಗಳು ಮಾತ್ರ ಸೂಚಿತ ಲೋಕದತ್ತ ಕೊಂಡೊಯ್ಯುತ್ತವೆ. ಜೊತೆಗೆ ಲಿಖಿತಪಠ್ಯ ಸಾಮೂಹಿಕ ಓದನ್ನು ಏಕಾಂಗಿ ಓದುವಿಕೆಯಾಗಿ ಪರಿವರ್ತಿಸಿ ಬಿಡುತ್ತದೆ. ಹೀಗಾಗಿಯೇ ಇತಿಹಾಸಕಾರನು ಒಂದು ಶಾಸನ ಪಠ್ಯವನ್ನು ಬಳಸಿಕೊಂಡ ಹಾಗೆ, ಮೌಖಿಕ ಪಠ್ಯವನ್ನು ಇತಿಹಾಸ ರಚನೆಗೆ ಬಳಸಿಕೊಳ್ಳುವಂತಿಲ್ಲ. ಅದಕ್ಕೆ ಅದರದ್ದೇ ಆದ ಪ್ರತ್ಯೇಕ ವಿಧಾನವನ್ನೇ ರೂಪಿಸಿಕೊಳ್ಳಬೇಕಾಗುತ್ತದೆ.

ಜನರ ಇತಿಹಾಸಕ್ಕೆ ಸಾರ್ವತ್ರಿಕ ಸಾರ್ವಕಾಲಿಕ ಅಭಿವ್ಯಕ್ತಿ ಏನೂ ಇಲ್ಲ. ಅವು ಕಾಲ, ಸ್ಥಳ, ವ್ಯಕ್ತಿ ಮತ್ತು ವೃತ್ತಿಗಳಿಗನುಗುಣವಾಗಿ ಸಾಂದರ್ಭಿಕ ಅಭಿವ್ಯಕ್ತಿಯನ್ನು ಪಡೆಯುತ್ತವೆ. ಇದರಿಂದಾಗಿಯೇ ಒಂದು ನಿರ್ದಿಷ್ಟ ಜನಪದ ಪಠ್ಯದಲ್ಲಿ ನಿರ್ದಿಷ್ಟ ವಿವರಗಳು ಮಾತ್ರ ದಾಖಲಾಗಿರುತ್ತವೆ. ಈ ಕಾರಣದಿಂದಲೇ ಹೆಚ್ಚು ಹೆಚ್ಚು ಪಠ್ಯಗಳ ಸಂಗ್ರಹಗಳಿಂದ ಮಾತ್ರ ಸಮಗ್ರ ವಿವರಗಳ ಕಡೆಗೆ ಚಾಚಿಕೊಳ್ಳಲು ಸಾಧ್ಯವಿದೆ. ಇಂಥ ಮೌಖಿಕ ವಿವರಗಳ ಸಹಾಯದಿಂದ ಇತಿಹಾಸವನ್ನು ಪುನಃ ಸೃಷ್ಟಿಸಿಕೊಳ್ಳಲು ಸಾಧ್ಯವಿದೆ. ಆದರೆ ಮೌಖಿಕ ಸಾಮಾಗ್ರಿಗಳು ತಮಗೆ ತಾವೇ ಐತಿಹಾಸಿಕವಾಗಿ ಉಳಿಯುವುದಿಲ್ಲ. ಅವು ವರ್ತಮಾನದಲ್ಲಿ ಮಾತ್ರ ನಿರೂಪಿಸಲ್ಪಡುತ್ತವೆ. ವರ್ತಮಾನದ ಹಂಗಿಲ್ಲದ ಮೌಖಿಕ ಸಾಮಾಗ್ರಿಗಳೇ ಇಲ್ಲ. ಈ ಕಾರಣದಿಂದ ಮೌಖಿಕ ಸಾಮಾಗ್ರಿಗಳನ್ನು ನಾವು ಕೇವಲ ಇತಿಹಾಸಕ್ಕೆ ಸೀಮಿತಗೊಳಿಸುವಂತಿಲ್ಲ. ಸಂಸ್ಕೃತಿ, ಸಮಾಜ, ರಾಜಕಾರಣ, ಮತ್ತಿತರ ವಿಷಯಗಳು ಅವುಗಳಲ್ಲಿ ಅಡಕವಾಗಿರುತ್ತವೆ. ಕೇವಲ ಇತಿಹಾಸ ಬದ್ಧತೆಯನ್ನು ಮೌಖಿಕ ಸಾಮಾಗ್ರಿಗಳಿಂದ ನಾವು ನಿರೀಕ್ಷಿಸಬಾರದು. ಮೌಖಿಕ ನಿರೂಪಕನೂ ಇತಿಹಾಸ ಮತ್ತು ವರ್ತಮಾನ ಕಾಲದ ಮಧ್ಯದ ಅಂತರವನ್ನು ತೊಡೆದು ಹಾಕಿ ಬಿಡುವುದರಿಂದ ಅವುಗಳನ್ನು ಬಳಸಿಕೊಳ್ಳುವಾಗ ಸಾಕಷ್ಟು ಎಚ್ಚರವಾಗಿರಬೇಕಾಗುತ್ತದೆ. ಈ ಅರಿವಿನಲ್ಲಿ ಪ್ರಸ್ತುತ ಈ ಕಿರುಪ್ರಬಂಧದಲ್ಲಿ ಹಂಪಿ ಪರಿಸರದ ಬಗೆಗಿನ ಮೌಖಿಕ ಮಾಹಿತಿಗಳನ್ನು ಕಲೆಹಾಕುವ ಪ್ರಯತ್ನ ಮಾಡಲಾಗಿದೆ.

•••

# ಅಧ್ಯಾಯ ಎರಡು

# ಐತಿಹ್ಯಗಳ ಅರ್ಥ, ಸ್ವರೂಪ, ಹುಟ್ಟು, ಬೆಳವಣಿಗೆ ಮತ್ತು ಪ್ರಕಾರಗಳು

---

# ಅಧ್ಯಾಯ ಎರಡು

# ಐತಿಹ್ಯ ಅರ್ಥ, ಸ್ವರೂಪ, ಹುಟ್ಟು, ಬೆಳವಣಿಗೆ ಮತ್ತು ಪ್ರಕಾರಗಳು

## ೨.೧. ಐತಿಹ್ಯ ಅರ್ಥ, ಸ್ವರೂಪ, ಹುಟ್ಟು ಮತ್ತು ಬೆಳವಣಿಗೆ

'ಇತಿ', 'ಇತಿಹ' ಎನ್ನುವ ಸಂಸ್ಕೃತ ರೂಪದಿಂದ 'ಐತಿಹ್ಯ'ವು ನಿಷ್ಪನ್ನವಾಗಿದ್ದು ಈ ಶಬ್ದ ರೂಪಗಳಿಗೆ 'ಹೀಗೆ, ಹೀಗಿತ್ತು', 'ಹೀಗೆ ನಡೆದದ್ದು' ಎಂಬಿತ್ಯಾದಿ ಅರ್ಥಗಳಿವೆ. ಅದರಂತೆ ಇಂದು ನಾವು ಯಾವುದನ್ನು 'ಐತಿಹ್ಯ' ಎಂದು ಗುರುತಿಸುತ್ತೇವೆಯೋ ಅದು ಒಂದು ಕಾಲದಲ್ಲಿ ನಿಜವಾಗಿ ನಡೆದ ಘಟನೆಯೊಂದರ ನಿರೂಪಣೆಯೆಂಬ ವಿಶ್ವಾಸ ಅದರ ಪ್ರಸಾರಕರಲ್ಲಿರುತ್ತದೆ. ಈ ಅಂಶವನ್ನು ಮನಗಂಡೇ ನಮ್ಮ ಜಾನಪದ ವಿದ್ವಾಂಸರು ಜನಪದ ಸಾಹಿತ್ಯ ಈ ವಿಶಿಷ್ಟ ಪ್ರಕಾರವನ್ನು 'ಐತಿಹ್ಯ'ವೆಂದು ಕರೆದರು.

'ಐತಿಹ್ಯ'ವೆಂದರೆ ಮೌಖಿಕ ಸಂಪ್ರದಾಯದಲ್ಲಿ ಉಳಿದುಕೊಂಡುಬಂದಿರುವ, ಹಿಂದೆ ವಾಸ್ತವವಾಗಿ ನಡೆದದ್ದೇ ಎಂಬುದಾಗಿ ಅದರ ಪ್ರಸಾರಕರಿಗೆ ವಿಶ್ವಾಸವಿರುವ ಘಟನೆಗಳ ಗದ್ಯರೂಪದ ನಿರೂಪಣೆ. ಇಲ್ಲಿ ಲಿಖಿತ ದಾಖಲೆಗಳೇನೂ ಇರುವುದಿಲ್ಲ. ಇತರ ಲಿಖಿತ ದಾಖಲೆಗಳಿಗೂ ಐತಿಹ್ಯದಲ್ಲಿ ಹೇಳಲಾಗುವ ವಿಚಾರಗಳಿಗೂ ಕೆಲವೊಮ್ಮೆ ಸಾಮ್ಯ-ಸಂಬಂಧ ಕಂಡುಬರಬಹುದು. ಇನ್ನೂ ಕೆಲವು ಬಾರಿ ಇವೆರೆಡು ತೀರಾ ವ್ಯತ್ಯಾಸವೇ ಆಗಿ ಕಾಣಬಹುದು. ಅಂದರೆ ಐತಿಹ್ಯವೆಂದು ನಾವಿಂದು ತಿಳಿಯುವ ಈ ಜನಪದ ಇತಿಹಾಸವು ನೈಜ ಘಟನೆಗಳ ನಿರೂಪಣೆಯಾಗಿರಬಹುದು ಅಥವಾ ಕಲ್ಪಿತ ಅಂಶಗಳ ನಿರೂಪಣೆಯಾಗಿರಲೂ ಬಹುದು. ಕೆಲವು ಐತಿಹ್ಯಗಳಲ್ಲಿ ನೈಜ ಘಟನೆಯ ಸಣ್ಣ ಎಳೆಯೊಂದು ಮಾತ್ರವಿದ್ದು, ಅದರ ಸುತ್ತ ಕಲ್ಪಿತಾಂಶಗಳು ಹಬ್ಬಿಕೊಂಡಿರುತ್ತವೆ. ಹಿಂದೆ ನಡೆದ, ನಡೆದಿರಬಹುದಾದ ಕೇಳಿದ ಘಟನೆಯೊಂದರ ಪುನರ್‌ಸೃಷ್ಟಿ ಇದಾಗಿದ್ದರೂ ಇಂದು ಇದಕ್ಕೂ ಇತಿಹಾಸ ರಚನೆಗೆ ಒಂದು ಆಕರವಾಗಿ ಬಳಕೆಯಾಗುವ ಸ್ಥಾನ ದೊರೆತಿದೆ.

ಐತಿಹ್ಯ ಪದವನ್ನು 'ಲೆಜೆಂಡ್' ಎಂಬುದಕ್ಕೆ ಸಂವಾದಿಯಾಗಿ ಬಳಸಲಾಗುತ್ತದೆ. 'ಲೆಜೆಂಡ್' ಮೂಲತಃ ಲ್ಯಾಟಿನ್ ಪದವಾಗಿದೆ. ಅಲ್ಲಿ ಅದಕ್ಕೆ 'ಥಿಂಕ್ಸ್ ಟು ಬೀ ರೀಡ್' ಎಂಬ ಅರ್ಥವಿದೆ. ಫ್ರೆಂಚ್ ಭಾಷೆಯಲ್ಲಿಯೂ ಇದೇ ಅರ್ಥ ಉಳಿದು ಬೆಳೆದುಕೊಂಡು ಬಂದಿದೆ. ಇವು ಪ್ರಾರ್ಥನಾ ಮಂದಿರಗಳಲ್ಲಿ ಪಠಣ ಮಾಡಬಹುದಾದ ವಿಷಯಗಳಾಗಿದ್ದವು.[೧]

ಚಾರಿತ್ರಿಕವಾಗಿ ಈ 'ಲೆಜೆಂಡ್' ಪದದ ಅರ್ಥ ಒಂದೇ ರೀತಿಯಾಗಿ ಉಳಿದಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಜಾನಪದ ಅಧ್ಯಯನ ಬೆಳೆದುಬಂದಂತೆ ಅದರ ಅರ್ಥದಲ್ಲಿ ವ್ಯತ್ಯಾಸವಾಗತೊಡಗಿತು. ಮೊದಲಿನ 'ಸಾಧು-ಸಂತರ ಜೀವನ ಕಥೆ' ಎಂಬ ಅರ್ಥವನ್ನುಳಿಸಿಕೊಂಡು ಅದು ಇನ್ನಷ್ಟು ಹಿಗ್ಗತೊಡಗಿತು. ೧೯-೨೦ನೆಯ ಶತಮಾನದ ಹೊತ್ತಿಗೆ 'ಲೆಜೆಂಡ್' ಪದವು 'ಪರಂಪರೆಯಿಂದ ಬಂದದ್ದು' ಎಂಬ ವಿಶಾಲಾರ್ಥದಲ್ಲಿ ಬಳಕೆಯಾಗತೊಡಗಿತು. ಐತಿಹ್ಯಗಳ ಹಿಂದೆ ಒಂದು ಚಿಂತನೆ ಇರುವುದಂತೂ ಸ್ಪಷ್ಟ. ಭಾರತೀಯ ಚಿಂತನೆಯಲ್ಲಿ ಐತಿಹ್ಯವೇ ಇತಿಹಾಸ ಅಥವಾ ಆಧುನಿಕ ಪರಿಭಾಷೆಯಲ್ಲಿ ಚರಿತ್ರೆ ಅಥವಾ ಹಿಸ್ಟೋರಿ. ಪರಂಪರೆಯಿಂದ ಬಂದ ತಿಳುವಳಿಕೆಯ ಹಿನ್ನೆಲೆಯಲ್ಲಿ ಸೃಷ್ಟಿಯಾದ ಚರಿತ್ರೆ ಅದು. 'ಇದು ಹೀಗೆಯೇ ಇತ್ತು' ಎಂಬುದರ ನಿರೂಪಣೆ ಅದನ್ನು ನಿರೂಪಿಸುವವನ ದೃಷ್ಟಿಯಲ್ಲಿ ಇತಿಹಾಸವು 'ನಿಜವೇ' ಆಗಿರುತ್ತದೆ. ಅವನ ದೃಷ್ಟಿಯಲ್ಲಿ ಅದು ನಡೆದ ಘಟನೆಗಳ ನಿರೂಪಣೆ. ಈ ಘಟನೆಗಳ ನಿರೂಪಣೆಯ ಉದ್ದೇಶ ಮನರಂಜನೆಯಲ್ಲ. ಬದಲಾಗಿ ಸಮಕಾಲೀನ ಬದುಕಿಗೆ ಹಿರಿದಾದ ಮಹತ್ತ್ವವನ್ನು ಪ್ರಾಪ್ತಿಸಿ ಕೊಳ್ಳುವುದು. ಈ ಕೆಲಸ ಮಹತ್ತರ ಮೌಲ್ಯಗಳನ್ನು, ವರ್ತಮಾನದಲ್ಲಿ ಸಾಕ್ಷಾತ್ಕರಿಸಿಕೊಳ್ಳುವ ಗಂಭೀರ ಪ್ರಯತ್ನ, ಲಘುಧಾಟಿಯಾಗಲೀ, ಲೇವಡಿತನವಾಗಲೀ ಇಲ್ಲಿಸಲ್ಲದು. ಹೀಗಾಗಿ ಇತಿಹಾಸದ ನಿರೂಪಣೆ ಯಲ್ಲಿ ವ್ಯತ್ಯಾಸ ಮಾಡತಕ್ಕದ್ದಲ್ಲ, ಅದು ಯಾರು ಬೇಕಾದರೂ ಹೇಳಬಹುದಾದದ್ದು ಅಲ್ಲ. ಮೌಖಿಕ ಪರಂಪರೆಯಲ್ಲಿಯೇ ಮುಂದುವರೆದುಕೊಂಡು ಬಂದರೂ ಇತಿಹಾಸವು ತುಂಬ ಜಾಗೃತ ಸ್ಥಿತಿಯನ್ನು ಕಾದುಕೊಂಡಿರುತ್ತದೆ.

ಐತಿಹ್ಯವು ಇತಿಹಾಸಕ್ಕೆ ಸಮೀಪವರ್ತಿಯಾದದ್ದು. ಚರಿತ್ರೆಯ ನಿರ್ಮಿತಿಯಂತೆ ಇಲ್ಲಿ ಕೂಡ ಭೌತಿಕ ಆಧಾರವೊಂದನ್ನು ಅದರ ಮೂಲ ಸ್ವರೂಪದಲ್ಲೇ ಹಿಡಿದಿಟ್ಟುಕೊಳ್ಳಲಾಗುವುದು. ಅನಂತರ ನಂಬಿಕೆಗಳ, ಕಲ್ಪನೆಗಳ ಆಧಾರದಿಂದ ಅದನ್ನು ಬಳಸಲಾಗುವುದು. ಮೂಲ ಘಟನೆಯೊಂದರ ಸುತ್ತ ರಮ್ಯವಾದ ವಿವರಣೆಯನ್ನು ಕಟ್ಟಲಾಗುವುದು.[೨]

'ಐತಿಹ್ಯ' ಇತಿಹಾಸದಿಂದ ಬಹುದೂರ ಸಾಗಿರುತ್ತದೆ. ಹಾಗೆಂದು ಅದು ಪೂರ್ವಕಲ್ಪಿತ ದಂತ ಕತೆಯೂ ಅಲ್ಲ. ಎಲ್ಲೋ, ಯಾವಾಗಲೋ, ಘಟಿಸಿದ ಒಂದು ಘಟನೆ ಅಥವಾ ಒಂದು ಸ್ಥಳದ ವೈಶಿಷ್ಟ್ಯ ಅಥವಾ ವ್ಯಕ್ತಿಯೊಬ್ಬನ ಸಾಧನೆ. ಆ ಪರಿಸರದ ವ್ಯಕ್ತಿಗಳ ಮೇಲೆ ಪ್ರಭಾವ ಬೀರಿರುತ್ತದೆ. ಈ ಪ್ರಭಾವವೇ ಪರಿಣಾಮವಾಗಿ ಅವರಲ್ಲೊಬ್ಬ ಪ್ರತಿಭಾಶಾಲಿ, ಆ ನಿರ್ದಿಷ್ಟ ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ತನ್ನ ಕಲ್ಪನೆಯ ವೈಭವೀಕರಣದ ಅಂಶಗಳನ್ನು ಸೇರಿಸಿ ಬಿಡುತ್ತಾನೆ. ಆ ಪರಿಷ್ಕೃತ ಅಂಶಗಳನ್ನು ಹರಡುತ್ತಾನೆ. ಹೀಗೆ ಒಂದು ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ಒಂದು ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯ ಉಂಟಾಗುತ್ತದೆ. ಇಂಥ ಐತಿಹ್ಯದ ಸೃಷ್ಟಿಯಲ್ಲಿ ದೊರೆತ ದಾಖಲೆಗಳನ್ನು ಬಳಸಿಕೊಳ್ಳಲಾಗುತ್ತದೆ. ಆದರೆ ಇವು ನೈಜ ಚರಿತ್ರೆಯಾಗಲು ಬೇಕಾದ ವಸ್ತುನಿಷ್ಠತೆಯಿಂದ, ವೈಜ್ಞಾನಿಕ ದೃಷ್ಟಿಕೋನದಿಂದ ದೂರ ಸರಿದು ಕಲ್ಪನೆಯ ಆಶ್ರಯವನ್ನು ಪಡೆದು ಕಾವ್ಯದ ಧಾಟಿಯಲ್ಲಿ ಸಾಗುತ್ತದೆ. ಭಾವುಕತೆ ವಿಜೃಂಭಿಸುತ್ತದೆ. ಅಂದಾಗಲೂ ನಡೆದಿರಬಹುದಾದ ಘಟನೆಯೊಂದು ಅದರ ತಳಭಾಗದಲ್ಲಿ ರೂಪಾಂತರಗೊಳ್ಳದೇ ಇರುವುದುಂಟು. ಸಂಭಾವ್ಯ ಅಂಶಗಳು ಮೇಲಿಂದ ಮೇಲೆ ಸೇರುತ್ತಿದ್ದರೂ ಮೂಲಸತ್ಯ, ಪೂರ್ಣ

ನಾಶವಾಗುವುದಿಲ್ಲ. ಕಲಾಕೃತಿಯೊಂದರಲ್ಲಿ ನಡೆಯುವಂತೆ ಪೂರ್ಣವಾಗಿ ಹೊಸ ಮೈಯನ್ನು ಪಡೆಯುವುದಿಲ್ಲ. ಅಂದರೆ ಪ್ರಾಚೀನಕಾಲದ ಚಾರಿತ್ರಿಕ ಸಂಗತಿಯೊಂದು ಕ್ರಮೇಣ ಅಪೂರ್ವವೂ, ಅದ್ಭುತವೂ ಆದ ಸನ್ನಿವೇಶಗಳನ್ನು ಒಳಗೊಳ್ಳುತ್ತಾ, ತಲೆಮಾರುಗಳ ಮೂಲಕ ಹರಿದು ಬರುವಾಗ, ಒಂದು ಹಂತದಲ್ಲಿ ಐತಿಹ್ಯ ನಿಧಾನವಾಗಿ ರೂಪುಗೊಳ್ಳುತ್ತಾ ಸಾಗಿ ಕೊನೆಗೆ ನಿರ್ದಿಷ್ಟ ಆಕೃತಿಯನ್ನು ಪಡೆದು ಗಟ್ಟಿಯಾಗುತ್ತದೆ.

ಈಗಾಗಲೇ ಸ್ಪಷ್ಟಪಡಿಸಿದಂತೆ ಚರಿತ್ರೆಗೂ, ಐತಿಹ್ಯಕ್ಕೂ ಇರುವ ಸಂಬಂಧವನ್ನು ಖಚಿತವಾಗಿ ಗುರುತಿಸಲಾಗದು. ಭೌತಿಕ ಆಧಾರವೊಂದನ್ನು ಆಧರಿಸಿ ಹುಟ್ಟಿದ ಕಥನಗಳು ಐತಿಹ್ಯಗಳಾದರೆ, ಅದೇ ಆಧಾರವನ್ನು ಆಧರಿಸಿದ ವಸ್ತುನಿಷ್ಠ ವೈಜ್ಞಾನಿಕ ನಿರೂಪಣೆ ಚರಿತ್ರೆಯಾಗಬಹುದು ಜನಪದರ ಮಟ್ಟಿಗೆ ಐತಿಹ್ಯಗಳೇ ಚರಿತ್ರೆಗಳಾಗಿವೆ.[3]

ಇಲ್ಲಿ ಇನ್ನೊಂದು ಅಂಶವನ್ನು ಸ್ಪಷ್ಟಪಡಿಸಿಕೊಳ್ಳಬೇಕು. ಅದೆಂದರೆ ಐತಿಹ್ಯಗಳ ಶೈಕ್ಷಣಿಕ ಪ್ರವೃತ್ತಿ ಐತಿಹ್ಯಗಳಲ್ಲಿ ಗಾಢವಾಗಿ ಹುದುಗಿರುವ ಅದರ ಶೈಕ್ಷಣಿಕ ಪ್ರವೃತ್ತಿಯು ಅದನ್ನು ಮನರಂಜನಾ ಉದ್ದೇಶದಿಂದ ಬೇರ್ಪಡಿಸಿದೆ. ಜನರಿಗೆ ತಿಳುವಳಿಕೆಗೆ ನೀಡಬಯಸುವ ಐತಿಹ್ಯದ ಶೈಕ್ಷಣಿಕ ಪ್ರವೃತ್ತಿಯೇ ಅದರ ವಿವರಣಾತ್ಮಕ ಭಾಗವನ್ನು ನಿಯಂತ್ರಿಸಿದೆ. ಅಂದರೆ ಐತಿಹ್ಯಗಳು ಸತ್ಯವೆಂಬ ಭಾವದಲ್ಲಿ ಸಂಕ್ಷಿಪ್ತವಾಗಿರುತ್ತದೆ. ಇಲ್ಲಿಯೇ ಐತಿಹ್ಯಗಳು ಜನಪದ ಕತೆಗಳಿಗಿಂತ ಭಿನ್ನವಾಗುತ್ತವೆ.

ಒಬ್ಬಾತನು 'ಸತ್ಯ' ಅಥವಾ 'ನಿಜ'ವನ್ನು ನಿರೂಪಿಸುವ ಬಗೆಯಲ್ಲಿಯೇ ಚರಿತ್ರೆ ಅಥವಾ ಐತಿಹ್ಯ ಅಥವಾ ಕತೆ, ಪುರಾಣ ಸೃಷ್ಟಿಯಾಗುತ್ತದೆ. 'ನಿಜ'ಕ್ಕೆ ಚರಿತ್ರೆಯಲ್ಲಿ ವಿವರಣೆ ಮತ್ತು ವ್ಯಾಖ್ಯಾನ ಇರುತ್ತದೆ. ಐತಿಹ್ಯದಲ್ಲಿ ಕೇವಲ ನಿರೂಪಣೆ ಇರುತ್ತದೆ. ಕಥೆಯಲ್ಲಿ ರಂಜನಾಂಶ ಪ್ರಧಾನವಾಗುತ್ತದೆ. ಪುರಾಣದಲ್ಲಿ ಸಾರ್ವಕಾಲಿಕತೆ ಮುಖ್ಯವಾಗುತ್ತದೆ. ಇವುಗಳೆಲ್ಲದರ ಹುಟ್ಟಿಗೆ ವ್ಯಕ್ತಿಯೊಬ್ಬನ ಪ್ರತಿಭೆ ಮಾತ್ರ ಸಾಲದು, ಆ ಪ್ರತಿಭೆ ಅರಳುವುದಕ್ಕೆ ಪೋಷಕವಾದ ಸಾಮಾಗ್ರಿಯೊಂದು ಭೌತಿಕ ಜಗತ್ತಿನಲ್ಲಿರಬೇಕು. ಇದರ ಸಹಾಯದಿಂದ ಅನಂತರ ನಿರೂಪಕನ ಕವಿ ಪ್ರತಿಭೆ ಪ್ರಾಚೀನ ಸತ್ಯಗಳನ್ನು ಸಾಕ್ಷಾತ್ಕರಿಸಬಹುದು.[4]

ಐತಿಹ್ಯದ ಗರ್ಭದೊಳಗಿರುವ 'ಭೌತಿಕ ಸತ್ಯ'ವು ವಿಶ್ವದ ಮಾನವವರ್ಗ, ಪ್ರಾಣಿವರ್ಗ ಮತ್ತು ಸಸ್ಯವರ್ಗದ ಯಾವುದೇ ವಿಷಯಗಳನ್ನು ಕುರಿತಾಗಿರಬಹುದು ಅಥವಾ ಈ ಮೂರರ ಬಳಕೆಯಲ್ಲಿಯೇ ಹುಟ್ಟಬಹುದು.

ಹೀಗಾಗುವಾಗ ಭೌತಿಕ ಸತ್ಯದ ಅಥವಾ ಆಧಾರದ ನಿರೂಪಣೆ ವೈಜ್ಞಾನಿಕವಾಗಿದ್ದಂತೆ ಮೇಲ್ನೋಟಕ್ಕೆ ತೋರಿದರೂ ಐತಿಹ್ಯದಲ್ಲಿ ಹಾಗಿರುವುದಿಲ್ಲ. ಅದು 'ನಾಟಕೀಯ ಅತಿಮಾನುಷತೆ'ಯನ್ನು ಹೊಂದುತ್ತದೆ. ಇಲ್ಲವೇ ಆ ವಿಮರ್ಶಕ ತಿಳುವಳಿಕೆಯಿಂದಲೂ ಹೊಸ ರೂಪ ಪಡೆಯಬಹುದು. ಹೀಗೆ ಆದಾಗಲೂ ಐತಿಹ್ಯದ ನಿರೂಪಕ ಕೊಡುವ ಭೌತಿಕ ಆಧಾರವು ಕಣ್ಣೆದುರೇ ಬರುತ್ತದೆ. ಆಧಾರಕ್ಕೂ ನಿರೂಪಣೆಗೂ, ವೈಜ್ಞಾನಿಕ ಸಂಬಂಧ ಇರುವುದಿಲ್ಲ. ಸುಸಂಬದ್ಧ ತರ್ಕ ಮಾತ್ರ ಇರುತ್ತದೆ. ಕಲ್ಲಿನ ಒಂದೆರಡು ಗೆರೆ ಇದ್ದರೆ ಮಾತ್ರ ಅದು 'ಸೀತೆಯ ಸೆರಗಿನ' ಗುರುತು ಎಂಬ ನಿರೂಪಣೆಯನ್ನು ಪಡೆದುಕೊಳ್ಳುತ್ತದೆ.

ಅದೇ ರೀತಿ ಕಲ್ಲಿದ್ದರೆ ಮಾತ್ರ 'ಭೀಮನ ಕಲ್ಲು' ಕೆರೆಯಿದ್ದರೆ ಮಾತ್ರ 'ಜಟಾಯು ತೀರ್ಥ' ಗುಹೆಯಿದ್ದರೆ ಮಾತ್ರ 'ಪಾಂಡವರ ಗುಹೆ' ಸಿದ್ಧವಾಗುತ್ತದೆ.

ಭೌತಿಕ ಆಧಾರ ಅಥವಾ ಸತ್ಯಗಳೆಲ್ಲವೂ ಐತಿಹ್ಯಕ್ಕೆ ವಸ್ತುವಾಗಲಾರವು. ಅವು ಸಾಮಾನ್ಯ ಜೀವನದ ಶಿಷ್ಟಕ್ಕಿಂತ ಭಿನ್ನವಾಗಿದ್ದು, ವಿಶಿಷ್ಟವಾಗಿರಬೇಕು ಅಥವಾ ಅಸಾಮಾನ್ಯವಾಗಿರಬೇಕು. ಸಾಮಾನ್ಯ ಶಿಷ್ಟಕ್ಕಿಂತ ವಿಶೇಷವಾಗಿರುವುದು, ಯಾವುದೇ ಆದರೂ ತನ್ನ ಇರುವಿಕೆಯ ಸ್ಥಿತಿಯಲ್ಲಿಯೇ ಜನರ ಮೇಲೆ ಪ್ರಭಾವ ಬೀರಲು ಸಮರ್ಥವಾಗಿರುತ್ತದೆ. ವ್ಯಕ್ತಿ, ಸ್ಥಳ ಮತ್ತು ಕಾಲವೆಂಬ ಮೂರು ವಿಂಗಡಣೆಗಳಲ್ಲಿ ಈ ಅಸಾಮಾನ್ಯತ್ವವನ್ನು ಗುರುತಿಸಲು ಸಾಧ್ಯವಿದೆ. ಊರಿಗೆಲ್ಲಾ ದೊಡ್ಡದಾಗಿರುವ ಬೆಟ್ಟ ಅಥವಾ ಕೆರೆ, ಸಾಮಾನ್ಯರಿಗಿಂತ ವಿಶೇಷ ಶಕ್ತಿವಂತನಾಗಿದ್ದ ಅಥವಾ ಪ್ರತಿಭಾಶಾಲಿ ವ್ಯಕ್ತಿ, ಸಾಮಾನ್ಯ ಜೀವನದಲ್ಲಿ ಸೇರ್ಪಡೆಯಾಗಿರುವ ಕಾಲಕ್ಕಿಂತ ಬೇರೆಯಾದ, ಅರ್ಥಪೂರ್ಣವಾದ ಕಾಲ ಇವು ಮೂರು ಐಕ್ಯ ಹೊಂದಿ ಅಥವಾ ಪ್ರತ್ಯೇಕ, ಪ್ರತ್ಯೇಕವಾಗಿಯೂ ಐತಿಹ್ಯದಲ್ಲಿ ಸ್ಥಾನ ಪಡೆಯುತ್ತವೆ."

ಐತಿಹ್ಯಗಳು ವಿಶಿಷ್ಟವನ್ನು ಶಿಷ್ಟಕ್ಕೆ ಒಗ್ಗಿಸುವ ಪ್ರಯತ್ನಗಳು ಐತಿಹ್ಯದ ನಿರೂಪಕನ ಪೀಠಿಕಾರೂಪದ ಮಾತಿನಲ್ಲಿಯೇ ಇದು ಸ್ಪಷ್ಟವಾಗುತ್ತದೆ. ಸರಿಯಾದ ಸ್ಥಳ, ಸಮಯ ಮತ್ತು ವ್ಯಕ್ತಿಯನ್ನು ತಡವರಿಸದೇ ಹೇಳುತ್ತಾ, ಭೌತಿಕ ಆಧಾರವನ್ನು ನಿರೂಪಣೆಯ ಮಧ್ಯೆ ಮತ್ತೆ, ಮತ್ತೆ ತರುವುದರ ಮೂಲಕ ಕಲ್ಪನೆಯ ಅಮೂರ್ತವಾಗದಂತೆ ನೋಡಿಕೊಳ್ಳುತ್ತಾನೆ. "ಅದರ ಪಳೆಯುಳಿಕೆಯಲ್ಲಿ ಇರುವುದರಿಂದಲೇ ನಾನದನ್ನು ನಂಬಿದೆ - ಇಲ್ಲದಿದ್ದರೆ ನನ್ನಂಥವನು ಅದನ್ನು ನಂಬುತ್ತಿರಲಿಲ್ಲ" ಎಂಬ ಚರಮವಾಕ್ಯ ನಿರೂಪಿತ ಸತ್ಯವನ್ನು ಇನ್ನಷ್ಟು ಬಲಗೊಳಿಸಲು ಪ್ರಯೋಗವಾಗುತ್ತದೆ.

ಹೀಗೆ ಹೇಳುವುದರ ಮೂಲಕ ಐತಿಹ್ಯದ ನಿರೂಪಕನು ಕೇಳುಗನ ಮತ್ತು ತನ್ನ ಜೀವನದ ಕೇಂದ್ರ ಆಶಯಕ್ಕೆ ಐತಿಹ್ಯವನ್ನು ತಂದು ಜೋಡಿಸುವನು. ಈ ಮೂಲಕ ತನ್ನ ಬದುಕಿಗೆ ಒಂದು ಸಮರ್ಥನೆಯನ್ನು ತಂದುಕೊಳ್ಳುತ್ತಾನೆ. ಈ ಸಮರ್ಥನೆಯಿಂದ ಆತ ತನ್ನ ಊರಿಗೆ, ಕುಲಕ್ಕೆ, ಸಮಾಜಕ್ಕೆ ಒಂದು ಘನಸ್ಥಿಕೆಯನ್ನು ಒದಗಿಸಿಕೊಡಬಲ್ಲವನಾಗುತ್ತಾನೆ. ಈ ಘನಸ್ಥಿಕೆ, ಐತಿಹ್ಯದಿಂದ ಪ್ರಾಪ್ತವಾಗಿ ವರ್ತಮಾನಕ್ಕೆ ಒಗ್ಗಿಕೊಳ್ಳುತ್ತದೆ.

ಇತಿಹಾಸದ ವಿಶಿಷ್ಟ ಅಸಾಮಾನ್ಯತ್ವವನ್ನು ವರ್ತಮಾನಕ್ಕೆ ಒಗ್ಗಿಸಿಕೊಳ್ಳುವ ಅವಸರದಲ್ಲಿ ವರ್ತಮಾನಕ್ಕೂ, ಇತಿಹಾಸಕ್ಕೂ ಇರುವ ಅಂತರ ಕುಗ್ಗಿ ಹೋಗುತ್ತದೆ. ಇಲ್ಲವೇ ಪೂರ್ಣವಾಗಿ ಕುಸಿಯುತ್ತದೆ. ಈಗ ಇದನ್ನು ವ್ಯಕ್ತಿಯೊಬ್ಬನು ತನ್ನನ್ನು ಪರಂಪರೆಯೊಂದಿಗೆ ಗುರುತಿಸಿಕೊಳ್ಳಲು ಮಾಡಿದ ಪ್ರಯತ್ನವೆಂದು ಹೇಳಬಹುದು. ಏನಿದ್ದರೂ ಐತಿಹ್ಯಗಳ ಕಾರ್ಯವು ಬದುಕನ್ನು ಸುಲಲಿತವಾಗಿ ಮುಂದುವರೆಸಿಕೊಂಡು ಹೋಗುವ ಉದ್ದೇಶವನ್ನು ಹೊಂದಿದೆ. ಅದು ಏನಿದ್ದರೂ ಪೂರ್ಣವಾಗಿ ಬದುಕಿರುವವರಿಗಾಗಿ ಅವರ ಲೌಕಿಕ ಜೀವನದ ಒಳತಿಗಾಗಿ ಈ ದೃಷ್ಟಿಯಿಂದ ಐತಿಹ್ಯಗಳು ಚರಿತ್ರೆಯ ಧ್ವನಿಪೂರ್ಣ ಸಂಕೇತಗಳಾಗಿರುವಂತೆ ವರ್ತಮಾನದ ಬಲಿಷ್ಠ ಸ್ವರಗಳೂ ಹೌದು.

ಮೇಲೆ ವಿವರಿಸಲಾದ ಗುಣಗಳಿಂದಾಗಿಯೇ ಐತಿಹ್ಯಗಳು ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧವಾಗಿರಬೇಕಾಗುತ್ತದೆ. ಗಾಢವಾದ ಸ್ಥಳೀಕರಣ ಗುಣವನ್ನು ಹೊಂದಿದ ಐತಿಹ್ಯಗಳು ಆ ಸ್ಥಳದ ಕಾಲ ಮತ್ತು ವ್ಯಕ್ತಿಗಳೊಂದಿಗೆ ಒಂದು ಸೂಕ್ಷ್ಮ ಸಂಬಂಧವನ್ನು ಹೊಂದುವುದು ಅನಿವಾರ್ಯ.[೬]

ಇದರಿಂದಾಗಿ ಪ್ರತಿ ಐತಿಹ್ಯಗಳಿಗೆ ಸ್ಥಳೀಯವೇ ಆದ ಒಂದು ಶೈಲಿಯೂ ಲಭ್ಯವಾಗುತ್ತದೆ. ಸ್ಥಳದ ಬದಲಾವಣೆಯೊಂದಿಗೆ ಐತಿಹ್ಯದ ಸ್ವರೂಪವೂ ಬದಲಾಗಬಹುದು ಹಾಗೆ ಒಂದು ನಿರ್ದಿಷ್ಟ ಸ್ಥಳದಲ್ಲಿನ ಉತ್ಪಾದನಾ ವಿಧಾನಗಳಲ್ಲಾದ ಮಾರ್ಪಾಡು ಅಥವಾ ಆ ಸಮಾಜದ ಆರ್ಥಿಕ ರಚನೆಯಲ್ಲಾದ ಸ್ಥಿತ್ಯಂತರಗಳು ಐತಿಹ್ಯವನ್ನು ಸಾಯಿಸಿ ಅದರ ಸ್ಥಾನದಲ್ಲಿ ಇನ್ನೊಂದನ್ನು ಹುಟ್ಟುಹಾಕಬಹುದು. ಆದರೆ ಅಲ್ಲಿ ಒಂದು ಪ್ರಮುಖ ಅಂಶವಿದೆ. ಒಂದು ಕಾಲದ ವರ್ತಮಾನದ ಅವಶ್ಯಕತೆಗಳಿಗೆ ಅನುಗುಣವಾಗಿ ಹುಟ್ಟಿ ಬೆಳೆದ ಐತಿಹ್ಯವೊಂದು ಅನಂತರ ತಾನು ಹುಟ್ಟಿ ಬೆಳೆದ ಪರಿಸರವನ್ನೇ ನಿಯಂತ್ರಿಸುವಷ್ಟು ಪ್ರಬಲವಾಗಿ ಬೆಳೆಯಬಹುದು. ಆ ಮೂಲಕ ಸಮಾಜದ ಆರ್ಥಿಕ ರಚನೆಗಳಲ್ಲಿ ಮಾರ್ಪಾಡುಗಳಾಗದಂತೆ ತಡೆ ಗೋಡೆಯಾಗಬಹುದು. ಚರಿತ್ರೆಯ ಕೊಡುಗೆಯಾದ ಐತಿಹ್ಯಗಳು ಮುಂದೆ ಚರಿತ್ರೆಯ ನೆಲೆಗಳೂ ಆಗಿ ಬಿಡಬಹುದು. ಈ ಮಾತು ಭಾರತದ ಸಮಾಜ ಪರಿಸ್ಥಿತಿಯಲ್ಲಿ ಹುಟ್ಟಿದ ಐತಿಹ್ಯಗಳಿಗೆ ಹೆಚ್ಚು ಸಮರ್ಪಕವಾಗಿ ಅನ್ವಯವಾಗುತ್ತದೆ. ಇದು ಜಾತಿನಿಷ್ಠ ದೇಶ, ಸಾಮಾಜಿಕ ಶ್ರೇಣೀಕರಣಕ್ಕೆ ಇಲ್ಲಿ ಜಾತಿಯೇ ತಳಹದಿಯಾಗಿದೆ.

ಶ್ರೇಣೀಕರಣದ ಮೇಲ್ತುದಿಯಲ್ಲಿರುವ ಬ್ರಾಹ್ಮಣನು ಪೂರ್ತಿ 'ಮಡಿ ಅಥವಾ ಶುದ್ಧ'ನಾದರೆ, ಕೆಳತುದಿಯಲ್ಲಿರುವ ಪಂಚಮ ಅಥವಾ ಹೊಲೆಯ ಪೂರ್ತಿಯಾಗಿ 'ಮೈಲಿಗೆ ಅಥವಾ ಅಶುದ್ಧನಾಗುತ್ತಾನೆ'. ಇವೆರಡರ ಮಧ್ಯೆದಲ್ಲಿ ಬರುವವರು ಮೇಲಿನವರ ದೃಷ್ಟಿಯಲ್ಲಿ 'ಮೈಲಿಗೆ'ಯಾಗಿಯೂ, ಕೆಳಗಿನವರ ದೃಷ್ಟಿಯಲ್ಲಿ 'ಮಡಿ'ಯಾಗಿಯೂ ವರ್ತಿಸುತ್ತಾರೆ. ಇಂಥ ಕಡೆ ಶ್ರೇಣೀಕರಣ ಮೇಲ್ತುದಿಯಿಂದ ಸೃಷ್ಟಿಯಾಗುವ ಐತಿಹ್ಯಗಳು ತನ್ನ ಅನುಲೋಮಕ್ರಮದಲ್ಲಿ ಎಲ್ಲರಿಗೂ ಅರ್ಥಪೂರ್ಣವಾಗುತ್ತದೆ. ಆದರೆ ಕೆಳತುದಿಯಿಂದ ಸೃಷ್ಟಿಯಾದದ್ದು, ತನ್ನ ವಿಲೋಮ ಕ್ರಮದಲ್ಲಿ ಮೇಲಿನವರಿಗೆ ಕೇವಲ 'ಕಟ್ಟುಕತೆ'ಯಂತೆ ತೋರುತ್ತದೆ. ಇಂಥ ಕಡೆಗಳಲ್ಲಿ ಆಳುವವರ್ಗ ಅಥವಾ ಜಾತಿಯು ನಿರ್ಮಾಣ ಮಾಡಿದ ಐತಿಹ್ಯಗಳು ಸಾಮಾಜಿಕ ಶ್ರೇಣೀಕರಣವನ್ನು ಉಳಿಸುವ, ಮತ್ತಷ್ಟು ಬಲಪಡಿಸುವ ಉದ್ದೇಶವನ್ನು ಹೊಂದಿರುತ್ತವೆ. ಜಾತಿಯ ಇತಿಹಾಸವು ವರ್ತಮಾನಕ್ಕೆ ಒಗ್ಗಿ ಬರುವಾಗ ಇತಿಹಾಸದ ಶ್ರೇಣೀಕರಣವು ವರ್ತಮಾನವನ್ನು ಬಲಪಡಿಸುತ್ತದೆ.

ಆಧುನೀಕರಣದಿಂದ ಜಾತಿ ಸಂಬಂಧಗಳು ಸಡಿಲವಾಗತೊಡಗಿದರೆ, ಆಗ ಹಳೆಯ ವ್ಯವಸ್ಥೆಯ ಗರ್ಭದಿಂದ ಹೊಸ ಐತಿಹ್ಯಗಳು ಹುಟ್ಟಿ ಹಳೆಯದನ್ನು ಗಟ್ಟಿಗೊಳಿಸಲು ಶ್ರಮಿಸಬಹುದು. ಇದನ್ನು ತುಂಬ ವ್ಯಾಪಕವಾದ ಚೌಕಟ್ಟಿನಲ್ಲಿಟ್ಟು ಹೇಳುವುದಾದರೆ ಒಂದು ಐತಿಹ್ಯವು ತಾನು ಬದುಕುಳಿದ ಸಾಂಸ್ಕೃತಿಕ ವಾತಾವರಣದ ಒಳಗಿನ ಅಪಾಯಗಳ ವಿರುದ್ಧ ಜನರನ್ನು ಹೋರಾಟಕ್ಕೆ ಸಿದ್ಧಗೊಳಿಸುತ್ತದೆ.[೬]

## ೨.೨. ಐತಿಹ್ಯಗಳ ಪ್ರಕಾರಗಳು

ಐತಿಹ್ಯಗಳ ವಸ್ತು, ತಂತ್ರ, ಸ್ವರೂಪ ಮತ್ತು ಶೈಲಿಗಳು ತುಂಬ ಸಂಕೀರ್ಣವಾಗಿರುವುದರಿಂದ ಅವುಗಳನ್ನು ಕರಾರುವಕ್ಕಾಗಿ ವಿಭಜಿಸಲು ಸಾಧ್ಯವಾಗುವುದಿಲ್ಲ. ಎಷ್ಟೋ ಬಾರಿ ಐತಿಹ್ಯಗಳಿಗೆ ಒಂದು ನಿರ್ದಿಷ್ಟ ಪಠ್ಯವೇ ಇಲ್ಲದಿರುವುದರಿಂದ ಈ ಕೆಲಸಕ್ಕೆ ಇನ್ನಷ್ಟು ತೊಡಕುಂಟಾಗಿದೆ. ಇದರ ಜೊತೆಗೆ ಕರ್ನಾಟಕವೂ ಸೇರಿದಂತೆ ಭಾರತದಲ್ಲಿ ಐತಿಹ್ಯಗಳ ಸಂಪಾದನಾ ಕಾರ್ಯವು ನಡೆದಿಲ್ಲ. ಇದರಿಂದಾಗಿ ಐತಿಹ್ಯಗಳ ಸ್ವರೂಪದ ಬಗ್ಗೆ ಕೊನೆ ಮಾತುಗಳನ್ನು ಹೇಳುವುದು ಸಾಧ್ಯವಿಲ್ಲದ್ದಾಗಿದೆ.[೮]

ಪಾಶ್ಚಾತ್ಯ ದೇಶಗಳಲ್ಲಿ ಕೆಲವರಾದರೂ ಐತಿಹ್ಯಗಳನ್ನು ಅಧ್ಯಯನ ಸೌಕರ್ಯಕ್ಕೋಸ್ಕರ ವಿಭಜಿಸಿಕೊಂಡಿದ್ದಾರೆ. ಇದರಲ್ಲಿ ಆರಂಭಿಕ ಯತ್ನಗಳನ್ನು ನಡೆಸಿದವರು 'ಗ್ರೀಮ್' ಸಹೋದರರು. ಅವರು ದೊರೆತ ಐತಿಹ್ಯಗಳನ್ನು ಮೂರು ರೀತಿಯಿಂದ ವಿಭಜಿಸಿಕೊಂಡಿದ್ದಾರೆ. ಅವುಗಳೆಂದರೆ,

ಅ. ಸ್ಥಳೀಯ ಐತಿಹ್ಯಗಳು

ಆ. ವಿವರಣಾತ್ಮಕ ಐತಿಹ್ಯಗಳು

ಇ. ಚಾರಿತ್ರಿಕ ಐತಿಹ್ಯಗಳು

ಈ ವರ್ಗೀಕರಣ ತುಂಬ ಸ್ಥೂಲವಾಗಿರುವುದು ಮೇಲ್ನೋಟಕ್ಕೆ ಕಂಡುಬರುವ ವಿಚಾರ, ಇದರಲ್ಲಿ ಮೊದಲಿನ ವರ್ಗೀಕರಣವೇನೋ ಸಮಪರ್ಕವಾಗಿದೆ. ಆದರೆ ಎರಡನೆಯದಾದ 'ವಿವರ್ಣಾತ್ಮಕ ಐತಿಹ್ಯಗಳು', 'ಸ್ಥಳೀಯ ಐತಿಹ್ಯ'ಗಳಲ್ಲಿ ಇಡಿಯಾಗಿ ಸೇರಿ ಹೋಗುತ್ತದೆ.

ಬಹುತೇಕ ಜನಪದ ನಿರುಕ್ತಿಗಳು ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧವಾಗಿದ್ದು ಆ ಊರಿನ ವೈಶಿಷ್ಟ್ಯವನ್ನು ಸಾರುತ್ತವೆ. ಇವುಗಳನ್ನು ಹೊರತುಪಡಿಸಿದರೆ 'ಕೇವಲ ಸ್ಥಳೀಯ' ಅನ್ನುವುದು ಉಳಿಯುವುದೇ ಇಲ್ಲ.

ಮೂರನೆಯದಾದ ಚಾರಿತ್ರಿಕ ಐತಿಹ್ಯಗಳು, ಚಾರಿತ್ರ್ಯಕಾಂಶಗಳನ್ನೇ ಪ್ರಶ್ನಿಸಿ ಬಿಡುತ್ತದೆ. ಚರಿತ್ರೆಗೆ ನೇರವಾಗಿ ಸಂಬಂಧಿಸಿದೆ ಎನ್ನುವಾಗಲೂ ಅದು ಒಂದು ಪ್ರದೇಶಕ್ಕೆ ಬದ್ಧವಾಗಿರುತ್ತದೆ.[೯] ಈ ಕಾರಣಕ್ಕೆ ಗ್ರೀಮ್ ಸಹೋದರರ ವರ್ಗೀಕರಣವು ಸಾಕಷ್ಟು ಗೊಂದಲಕಾರಿಯಾಗಿದೆ ಹಾಗೆ ನೋಡಿದರೆ ಎಲ್ಲ ಐತಿಹ್ಯಗಳನ್ನು 'ಸ್ಥಳೀಯ ಐತಿಹ್ಯ'ಗಳೆಂದೇ ಕರೆಯಬಹುದು.

ಅಂತಾರಾಷ್ಟ್ರೀಯ ಮಟ್ಟದ ವಿಚಾರ ಸಂಕಿರಣವೊಂದರಲ್ಲಿ ಐತಿಹ್ಯಗಳನ್ನು ಈ ಕೆಳಗಿನಂತೆ ವಿಭಜಿಸಿಕೊಳ್ಳಲಾಯಿತು.

೧. ವಿವರಣಾತ್ಮಕ ಮತ್ತು ಅಂತಿಮಗತಿ ಶಾಸ್ತ್ರದ ಐತಿಹ್ಯಗಳು.

೨. ಚಾರಿತ್ರಿಕ ಐತಿಹ್ಯಗಳು ಮತ್ತು ನಾಗರಿಕತೆಯ ಚರಿತ್ರೆಗೆ ಸಂಬಂಧಿಸಿದ ಐತಿಹ್ಯಗಳು.

೩.	ಅತಿಮಾನುಷ ಶಕ್ತಿಗಳ ಅಥವಾ ಪೌರಾಣಿಕ ಐತಿಹ್ಯಗಳು.

೪.	ಧಾರ್ಮಿಕ ಐತಿಹ್ಯಗಳು ಅಥವಾ ದೇವರುಗಳ ಮತ್ತು ನಾಯಕರುಗಳ ಪುರಾಣಗಳು

ಈ ವಿಭಜನೆಯ ತಳದಲ್ಲಿ ಕ್ರೈಸ್ತ ತಾತ್ತ್ವಿಕತೆಯೊಂದು ಕೆಲಸ ಮಾಡಿದೆ. ಮೊದಲ ವಿಭಜನೆಯಲ್ಲಿ ಬರುವ ಅಂತಿಮ ಗತಿಶಾಸ್ತ್ರವು ಮಾನವ ಜೀವನದ ಅಂತಿಮ ಘಟ್ಟದಲ್ಲಿ ಬರುವ ಸಾವು, ತೀರ್ಪು ಮತ್ತು ಸ್ವರ್ಗ-ನರಕಗಳಿಗೆ ಸಂಬಂಧಿಸಿದೆ.[೧೦]

ಎರಡನೆಯ ವಿಭಜನೆಯು

೧. ಸ್ಥಳ ಐತಿಹ್ಯಗಳು

೨. ಘಟನಾ ಐತಿಹ್ಯಗಳು

ಈ ವಿಭಜನೆಯೇ ತಕ್ಕಮಟ್ಟಿಗೆ ವೈಜ್ಞಾನಿಕವಾಗಿದೆ. ಡಾರ್ಸನ್ನರು ಇದರ ವಿವರಣೆಯಲ್ಲಿ ಸ್ಪಷ್ಟ ಪಡಿಸಿದಂತೆ. ಈ ವಿಭಜನೆಯು ಐತಿಹ್ಯದ ವಸ್ತುವನ್ನು ಗಮನದಲ್ಲಿಟ್ಟುಕೊಂಡಿದೆ. ವಸ್ತುವಿನ ನಿರ್ವಹಣೆಯಲ್ಲಿ ಇತರ ಅಂಶಗಳು ಸೇರ್ಪಡೆಯಾದರೂ ವಸ್ತುವಿನ ಪ್ರಧಾನ ಒತ್ತು ಒಬ್ಬ ವ್ಯಕ್ತಿ, ಒಂದು ಸ್ಥಳ ಅಥವಾ ಒಂದು ಘಟನೆಗೆ ಸಂಬಂಧಿಸಿರುತ್ತದೆ. ಭಾರತೀಯ ಸಂದರ್ಭದ ಐತಿಹ್ಯಗಳನ್ನು ಇದರಲ್ಲಿ ಒಂದಲ್ಲ ಒಂದು ವರ್ಗಕ್ಕೆ ಸೇರಿಸಬಹುದು.

ವಸ್ತುವನ್ನೇ ಗಮನದಲ್ಲಿಟ್ಟುಕೊಂಡು ಕನ್ನಡ ವಿಶ್ವಕೋಶದಲ್ಲಿ ಐತಿಹ್ಯಗಳನ್ನು ಮೂರು ರೀತಿಯಿಂದ ವರ್ಗೀಕರಿಸಿದ್ದಾರೆ.

೧.	ಸೃಷ್ಟಿ ಅಥವಾ ಜಗತ್ತಿನ ಮೂಲವನ್ನು ಕುರಿತಾದ ವಿವರಣಾತ್ಮಕ ಐತಿಹ್ಯಗಳು.

೨.	ಅತಿಮಾನುಷ ವ್ಯಕ್ತಿಗಳ ಕುರಿತ ಐತಿಹ್ಯಗಳು.

೩.	ಐತಿಹಾಸಿಕ ಅಥವಾ ಮಿಥ್ಯೈತಿಹಾಸಿಕ ಐತಿಹ್ಯಗಳು.

ಮೊದಲನೆಯದರಲ್ಲಿ :- ಗುಂಪಿನಲ್ಲಿ ಪುರಾಣ ಸಂಪರ್ಕ ಹೊಂದಿದ ಮತ್ತು ಧಾರ್ಮಿಕ ಐತಿಹ್ಯಗಳನ್ನು ಸೇರಿಸಲಾಗಿದೆ.

ಎರಡನೆಯದರಲ್ಲಿ :- ಕಿನ್ನರಕತೆ, ದೆವ್ವ, ಪಿಶಾಚಿಗಳ ಕತೆಯನ್ನು ಸೇರಿಸಲಾಗಿದೆ.

ಮೂರನೆಯದರಲ್ಲಿ :- ಐತಿಹಾಸಿಕ ಗಣ್ಯವ್ಯಕ್ತಿಗಳನ್ನು, ಭ್ರಾಂತಿ ಮೂಲ ವ್ಯಕ್ತಿಗಳನ್ನು ಸೇರಿಸಲಾಗಿದೆ.[೧೧]

ಈ ವಿಭಜನೆಯು ಹಿಂದೆ ಹೇಳಿದ ಕ್ರೈಸ್ತ ಮೂಲ ತಾತ್ವಿಕತೆಯೊಡನೆ ಸಂಬಂಧ ಹೊಂದಿದೆ. ಅಲ್ಲದೆ ಐತಿಹ್ಯಗಳಿಂದ ಬೇರೆಯೇ ಸ್ವರೂಪವುಳ್ಳ ಕತೆಗಳನ್ನು, ಪುರಾಣಗಳನ್ನು ಒಳಗೊಂಡು ಸಂಕೀರ್ಣ ವಾಗಿದೆ. ವಿತರಣೆಯ ದೃಷ್ಟಿಯಿಂದ ಐತಿಹ್ಯಗಳನ್ನು ಅದೇ ವಿಶ್ವಕೋಶದಲ್ಲಿ ಎರಡು ರೀತಿಯಿಂದ ವಿಭಜಿಸಲಾಗಿದೆ.

೧. ಸ್ಥಳೀಯ ಐತಿಹ್ಯಗಳು

೨. ವಲಸೆಯ ಐತಿಹ್ಯಗಳು

ಮೊದಲನೆಯದಾದ ಸ್ಥಳೀಯ ಐತಿಹ್ಯಗಳಲ್ಲಿ ಮತ್ತೆ ಆರು ಒಳ ಪ್ರಕಾರಗಳನ್ನು ಗುರುತಿಸಲಾಗಿದೆ.

೧. ಪ್ರವಾಹ ಐತಿಹ್ಯ.

೨. ಬಲಿಗಳ ಐತಿಹ್ಯ.

೩. ಕೌಟುಂಬಿಕ ಐತಿಹ್ಯ.

೪. ಚಾರಿತ್ರಿಕ ಐತಿಹ್ಯ.

೫. ಜನಪದ ನಿರುಕ್ತಿಯ ಐತಿಹ್ಯ.

೬. ವಿವರಣಾತ್ಮಕ ಐತಿಹ್ಯ.

ಈ ವಿಭಜನೆ ಐತಿಹ್ಯಗಳ ಪ್ರಸರಣದ ದೃಷ್ಟಿಯಿಂದ ಮಹತ್ವವಾದದ್ದೇನೋ ನಿಜ, ಆದರೆ ಇವು ಐತಿಹ್ಯಗಳ ಅಗತ್ಯ ಗುಣವನ್ನು ವಿವರಿಸುವುದಿಲ್ಲ. ಎಷ್ಟೋ ಬಾರಿ ವಲಸೆಯ ಐತಿಹ್ಯ ಮತ್ತು ಸ್ಥಳೀಯ ಐತಿಹ್ಯಗಳು ಸಮ್ಮಿಶ್ರಗೊಂಡು ಹೊಸ ರೂಪ ಸಿದ್ಧಿಸುತ್ತದೆ.[೨]

ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳ ಕುರಿತು ವಿಶ್ಲೇಷಣಾತ್ಮಕ ಪ್ರಬಂಧ ಬರೆದ ತಾಳ್ತಜೆ ವಸಂತಕುಮಾರರವರು ಡಾರ್ಸನ್ನರ ವರ್ಗೀಕರಣವನ್ನೇ ಆಶ್ರಯಿಸಿ ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳನ್ನು ಮೂರು ರೀತಿಯಿಂದ ವಿಭಜಿಸಿದ್ದಾರೆ.

೧. ವ್ಯಕ್ತಿಪ್ರಧಾನ ಐತಿಹ್ಯಗಳು

೨. ಸ್ಥಳಪ್ರಧಾನ ಐತಿಹ್ಯಗಳು

೩. ಘಟನಾಪ್ರಧಾನ ಐತಿಹ್ಯಗಳು.

**೨.೨.೧. ವ್ಯಕ್ತಿಪ್ರಧಾನ ಐತಿಹ್ಯಗಳು**

ಈ ಐತಿಹ್ಯಗಳಲ್ಲಿ ಅಸಾಮಾನ್ಯನಾದ ಅಥವಾ ವಿಶಿಷ್ಟನಾದ ವ್ಯಕ್ತಿಯೊಬ್ಬನ ಸಾಧನೆಯ ನಿರೂಪಣೆಯಿರುತ್ತದೆ. ಐತಿಹ್ಯದ ಉಳಿದೆಲ್ಲಾ ವಿವರಗಳು ಈ ವ್ಯಕ್ತಿಯ ಸಾಧನೆಗೆ ಪೋಷಕವಾಗಿಯೇ ಬರುತ್ತವೆ. ವ್ಯಕ್ತಿ ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧನಾಗಿದ್ದರೂ ಅಲ್ಲಿ ಸ್ಥಳದ ಮಹತ್ತ್ವಿಕೆಯನ್ನು ಮೀರಿ ವ್ಯಕ್ತಿತ್ವ ಕೆಲಸ ಮಾಡುತ್ತಿರುತ್ತದೆ. ಅಲ್ಲದೆ ವ್ಯಕ್ತಿಯಿಂದಾಗಿಯೇ ಆ ಸ್ಥಳಕ್ಕೆ ಆ ಹೆಸರು ಬಂದಿರಲೂಬಹುದು.

ಇಂಥ ಐತಿಹ್ಯಗಳಲ್ಲಿ ಬರುವ ವ್ಯಕ್ತಿಗಳನ್ನು ಮತ್ತೆ ಎರಡು ರೀತಿಯಿಂದ ವಿಭಜಿಸಿಕೊಳ್ಳಬಹುದು.

೧. ಪೌರಾಣಿಕ ವ್ಯಕ್ತಿಗಳು

೨. ಐತಿಹಾಸಿಕ ವ್ಯಕ್ತಿಗಳು

**ಪೌರಾಣಿಕ ವ್ಯಕ್ತಿಗಳು :-** ಐತಿಹಾಸಿಕ ವ್ಯಕ್ತಿಗಳಾಗಿ ರೂಪು ತಳೆದು ವರ್ತಮಾನದ ವಿವರಣೆಯನ್ನು ನಿಯಂತ್ರಿಸುತ್ತಾರೆ. ಕರ್ನಾಟಕದಾದ್ಯಂತ ಕಂಡುಬರುವ ಭೀಮ, ರಾಮ, ಸೀತೆ, ಕೃಷ್ಣ, ಪರಶುರಾಮ, ಮೊದಲಾದವರ ಐತಿಹ್ಯವನ್ನು ಈ ವರ್ಗಕ್ಕೆ ಸೇರಿಸಬಹುದು.

**ಐತಿಹಾಸಿಕ ವ್ಯಕ್ತಿಗಳಲ್ಲಿ :-** ಕುಮಾರರಾಮ, ವಿಕ್ರಮಾದಿತ್ಯ, ಕುಮಾರವ್ಯಾಸ, ರಾಘವಾಂಕ, ಮಧ್ವಚಾರ್ಯರು, ಮೊದಲಾದವರು ಸೇರ್ಪಡೆಯಾಗುತ್ತಾರೆ. ಇಂಥ ಐತಿಹ್ಯಗಳ ಅಭ್ಯಾಸಕ್ಕೆ ಅನ್ಯಶಿಸ್ತುಗಳ ಜ್ಞಾನವನ್ನು ನಾವು ಪಡೆಯಬೇಕಾಗುತ್ತದೆ. ಏಕೆಂದರೆ ಪೌರಾಣಿಕ ಮತ್ತು ಐತಿಹಾಸಿಕ ವ್ಯಕ್ತಿಗಳ ಮೂಲ ಸ್ವರೂಪವನ್ನು ಪತ್ತೆ ಹಚ್ಚುವುದು ತ್ರಾಸದಾಯಕ ಕೆಲಸ. ಭಾರತದಲ್ಲಿ ಇತಿಹಾಸ ಮತ್ತು ಪುರಾಣ ಒಂದೆಂಬಂತೆ ನಿರೂಪಿತವಾಗಿರುವುದೇ ಇದಕ್ಕೆ ಕಾರಣ.

**೨.೨.೨. ಸ್ಥಳ ಪ್ರಧಾನ ಐತಿಹ್ಯಗಳು**

ಇವು ಪ್ರಧಾನವಾಗಿ ವ್ಯಕ್ತಿನಿಷ್ಠವಾದುವುಗಳು. ಇಲ್ಲಿ ವ್ಯಕ್ತಿಗಳಿಗೆ ಸ್ಥಾನವಿದ್ದರೂ, ಸ್ಥಳಕ್ಕೆ ಹೆಚ್ಚಿನ ಮಹತ್ತ್ವ ಸಂದಾಯವಾಗುತ್ತದೆ. ಸ್ಥಳದ ವಿಶಿಷ್ಟತೆ ಅಥವಾ ಅಸಾಮಾನ್ಯತ್ವವೇ ಐತಿಹ್ಯಗಳಿಗೆ ತಳಹದಿಯಾಗಿ ಕೆಲಸ ಮಾಡುತ್ತದೆ. ಒಂದು ಸ್ಥಳಕ್ಕೆ ಇರುವ ಹೆಸರಿನ ಉತ್ಪತ್ತಿಯನ್ನು ಇಂತಹ ಐತಿಹ್ಯಗಳು ರಂಜಿಕವಾಗಿ ಮಾಡುತ್ತವೆ. ದೊಡ್ಡದಾದ ಬೆಟ್ಟ, ಗುಡ್ಡಗಳು, ದಿನ್ನೆಗಳು, ವಿಶಾಲವಾದ ಕೆರೆ, ಆಳವಾದ ಬಾವಿ, ಸರೋವರ, ಅಸಂಖ್ಯಾತ ವಸ್ತುಗಳು ಇದರಲ್ಲಿ ಅಡಕವಾಗುತ್ತವೆ. ಸಂಖ್ಯಾದೃಷ್ಟಿಯಿಂದ ಇದಕ್ಕೆ ಮೊದಲ ಸ್ಥಾನ ನೀಡಬೇಕಾಗುತ್ತದೆ.[೧೫]

**೨.೨.೩. ಘಟನಾಪ್ರಧಾನ ಐತಿಹ್ಯಗಳು**

ಇಲ್ಲಿ ಒಂದು ನಿರ್ದಿಷ್ಟ ಘಟನೆ ಪ್ರಧಾನವಾಗಿದ್ದು, ಸ್ಥಳ ಮತ್ತು ವ್ಯಕ್ತಿಗಳು ಎರಡನೇ ಸ್ಥಾನದಲ್ಲಿ ಬರುತ್ತಾರೆ. ಎಷ್ಟೋ ಬಾರಿ ಒಬ್ಬ ವ್ಯಕ್ತಿ ಇರುವುದರ ಬದಲು, ಜನರ ಗುಂಪು ಅಥವಾ ಜನಸಮೂಹವೇ ಇರುತ್ತದೆ. ಶೃಂಗೇರಿಯ ದೇವಸ್ಥಾನವನ್ನು ಹೊಳೆಯಾಚೆಗೆ ಎಳೆಯಲು ಮಾಡಿದ ಪ್ರಯತ್ನವೊಂದನ್ನು ಹೇಳುವ ಐತಿಹ್ಯ.

**ಇದಕ್ಕೆ ಮಾದರಿ ಉದಾಹರಣೆ :-**

ಶಿವಲಿಂಗವನ್ನು ಆನೆಯಿಂದ ಕಟ್ಟಿ ಎಳೆಸಿದಾಗ ಶಿವಲಿಂಗದಲ್ಲಿ ರಕ್ತಬಂದದ್ದು.

ಮೇಯುತ್ತಿದ್ದ ಕೋಣಗಳು ಇದ್ದಕ್ಕಿದ್ದಂತೆ ಕಲ್ಲಾದದ್ದು.

ಶಿವಲಿಂಗಕ್ಕೆ ಬಿಳಿ ದನ ಹಾಲುಣಿಸಿದ್ದು.

ಸರ್ಪಗಳು ಹೂಳಿಟ್ಟ ನಿಧಿಯನ್ನು ಕಾಯುತ್ತಾ ಮಲಗಿದ್ದು.

ಹರಿಹರ, ರಾಘವಾಂಕನ ಹಲ್ಲು ಮುರಿದದ್ದು .... ಇತ್ಯಾದಿಗಳು.

ಈ ವರ್ಗದಲ್ಲಿ ಬರುತ್ತವೆ. ಒಂದು ನಿರ್ದಿಷ್ಟ ಘಟನೆಯೊಂದು ಇಲ್ಲಿ ಸಮೂಹದ ಮೇಲೆ ಪರಿಣಾಮ ಬೀರುತ್ತದೆ.

ಹೀಗೆ ಐತಿಹ್ಯಗಳು ಬಹು ವಿಧವಾಗಿರುತ್ತವೆ. ಚರಿತ್ರೆಯ ಗೂಢ ಸತ್ಯವೊಂದನ್ನು ತನ್ನ ಗರ್ಭದಲ್ಲಿ ಹುದುಗಿಸಿಕೊಂಡು ಜನರನ್ನು ಸಾಂಕೇತಿಕವಾಗಿ ಆಳುತ್ತಿರುತ್ತದೆ. ಐತಿಹ್ಯದ ಅವಲಂಬನೆಯಿಲ್ಲದೆ ಜನಪದರ ಜೀವನಕ್ರಮ ಸುಗಮವಾಗಿ ಸಾಗಲಾರದು.[೧೪]

**ಟಿಪ್ಪಣಿಗಳು**

೧. ಶಂಕರನಾರಾಯಣ.ತೀ.ನಂ., (ಸಂ), (೨೦೦೪), ಜನಪದ ಸಾಹಿತ್ಯ ಪ್ರಕಾರಗಳು, ಬೆಂಗಳೂರು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಪುಟ : ೧೦೫-೧೦೬.

೨. ಅದೇ., ಪುಟ : ೧೧೩-೧೧೪.

೩. ಅದೇ., ಪುಟ : ೧೨೬-೧೩೦.

೪. ಅದೇ., ಪುಟ : ೧೩೩-೧೩೭

೫. ಪುರುಷೋತ್ತಮ ಬಿಳಿಮಲೆ., (೧೯೯೬), ಹಂಪಿ ಜಾನಪದ, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ : ೨೪.

೬. ಅದೇ., ಪುಟ : ೫೫.

೭. ಸುಬ್ಬಣ್ಣ ರೈ. ಎ., (೧೯೯೪), ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು, ಮುಂಬೈ, ಮುಂಬೈ ವಿಶ್ವವಿದ್ಯಾಲಯ, ಮಾರೆ ಜೂನಿಯರ್ ಛೇಂಬರ್, ಮಾಣಿ, ಪುಟ : ೧೦-೧೪.

೮. ಅದೇ., ಪುಟ : ೭-೧೧.

೯. ಚಲುವರಾಜು., (೨೦೦೦), ಹಂಪಿ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ : ೨-೩.

೧೦. ಅದೇ., ಪುಟ : ೭ - ೧೧.

೧೧. ಪುರುಷೋತ್ತಮ ಬಿಳಿಮಲೆ., (೧೯೯೦), ಕರಾವಳಿ ಜಾನಪದ, ಮಂಗಳೂರು, ಮಂಗಳೂರು ವಿಶ್ವವಿದ್ಯಾಲಯ, ಮಂಗಳ ಗಂಗೋತ್ರಿ, ಪುಟ : ೭೩-೮೦.

೧೨. ಅದೇ., ಪುಟ : ೮೧-೮೨.

೧೩. ಅದೇ., ಪುಟ : ೮೫

೧೪. ಚಿದಾನಂದಮೂರ್ತಿ.ಎಂ., (೧೯೯೮), ಹೊಸತು, ಹೊಸತು, ಬೆಂಗಳೂರು, ಕನ್ನಡ ಪುಸ್ತಕ ಪ್ರಾಧಿಕಾರ, ಪುಟ : ೩೫೮.

•••

# ಅಧ್ಯಾಯ ಮೂರು

# ಹಂಪಿ ಪರಿಸರದ ಚಾರಿತ್ರಿಕ ಹಿನ್ನೆಲೆ

## ೩.೧. ಹಂಪಿಯ ಚಾರಿತ್ರಿಕತೆ

'ಹಂಪಿ' ಕರ್ನಾಟಕ ಚರಿತ್ರೆಯ ಅಧ್ಯಯನ ಮತ್ತು ಸಂಶೋಧನೆಯಲ್ಲಿ ಮಹತ್ವದ ಸ್ಥಾನ ಪಡೆದಿದೆ. ಹೆಚ್ಚು ಅಧ್ಯಯನಗಳು ಮಧ್ಯಕಾಲೀನ ಚರಿತ್ರೆಗೆ ಸಂಬಂಧಿಸಿವೆ. ಆದರೆ ವಾಸ್ತವವಾಗಿ ಹಂಪಿಯು ಪ್ರಾಗೈತಿಹಾಸ ಕಾಲದಿಂದಲೂ ಮಾನವನ ಚಟುವಟಿಕೆಯ ಕೇಂದ್ರವಾಗಿರುವುದು ಗಮನಾರ್ಹ. ಹಂಪಿ ಪರಿಸರದಲ್ಲಿ ಶಿಲಾಯುಗ ಕಾಲದ ಅವಶೇಷಗಳು, ಗವಿವರ್ಣಚಿತ್ರಗಳು ಹೆಚ್ಚಾಗಿ ಕಂಡುಬರುತ್ತವೆ. ಅದೇ ರೀತಿ ಆದಿ ಚಾರಿತ್ರಿಕ ಕಾಲದಲ್ಲೂ ಹಂಪಿ, ದೇಶ ವಿದೇಶಗಳ ಗಮನಸೆಳೆದ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತೆಂದು ಸಂಶೋಧಕರು ಗುರುತಿಸಿದ್ದಾರೆ. ನಂತರದ ಶತಮಾನಗಳಲ್ಲಿ ಹಂಪಿ, ಧಾರ್ಮಿಕ ಕ್ಷೇತ್ರವಾಗಿ ಪಾವಿತ್ರ್ಯವನ್ನು ಪಡೆಯಿತು.

ಬಾದಾಮಿ ಚಾಲುಕ್ಯರು ಇಲ್ಲಿ ದಾನದತ್ತಿಗಳನ್ನು ನೀಡಿದ್ದಾರೆ. ನಂತರ ಆಳಿದ ರಾಷ್ಟ್ರಕೂಟರ ಕಾಲದಲ್ಲಿ ಇಲ್ಲಿ ಅನೇಕ ದೇವಾಲಯಗಳು ನಿರ್ಮಾಣಗೊಂಡವು. ಅಲ್ಲದೆ ಕಲ್ಯಾಣ ಚಾಲುಕ್ಯರು, ಹೊಯ್ಸಳರು ಮತ್ತು ಕುಮ್ಮಟದುರ್ಗದ ನಾಯಕರು ತಮ್ಮ ಆಳ್ವಿಕೆಯ ಕಾಲದಲ್ಲಿ ಗುಡಿ-ಗುಂಡಾರಗಳನ್ನು ಕಟ್ಟಿಸಿ ತೀರ್ಥಕ್ಷೇತ್ರವನ್ನಾಗಿಸಿದರು. ರಾಮಾಯಣ ಮತ್ತು ಮಹಾಭಾರತದಂತಹ ಮಹಾಕಾವ್ಯಗಳೊಂದಿಗೆ ಹಂಪಿ ಮತ್ತು ಅದರ ಪರಿಸರದ ಸ್ಥಳಗಳನ್ನು ಗುರುತಿಸುವ ಪ್ರಯತ್ನವನ್ನು ಕಾಣುತ್ತೇವೆ.[೧]

ಮೌರ್ಯ ಸಾಮ್ರಾಟ ಅಶೋಕನ 'ಬ್ರಹ್ಮಗಿರಿ ಶಾಸನ'ವು 'ಇಸಿಲಾ' ಸ್ಥಳವನ್ನು ಹೆಸರಿಸಿದ್ದು, ಇದು ಮೌರ್ಯ ಸಾಮ್ರಾಜ್ಯದ 'ಸುವರ್ಣಗಿರಿ' ಘಟಕದ ಆಡಳಿತ ಕೇಂದ್ರವಾಗಿತ್ತು. ಮಧ್ಯದಲ್ಲಿರುವ ಹಂಪಿ, ಕಬ್ಬಿಣದ ಅದಿರು ಹೊಂದಿರುವ ಬೆಟ್ಟಸಾಲುಗಳ ಪರಿಸರದಲ್ಲಿರುವ ಪ್ರಮುಖ ಕೇಂದ್ರವಾಗಿತ್ತು. ಕ್ರಿ.ಶ. ೧-೨ನೆಯ ಶತಮಾನದಲ್ಲಿ ಕಬ್ಬಿಣದ ಉತ್ಪಾದನೆ ಈ ಪರಿಸರದಲ್ಲಿ ಹೇರಳವಾಗಿ ನಡೆಯುತ್ತಿತ್ತು. ಹಂಪಿ ಪರಿಸರದ ಸ್ಥಳ ಪುರಾಣಗಳಲ್ಲಿ ನದಿ, ಬೆಟ್ಟ, ಋಷಿಗಳ ಉಲ್ಲೇಖಗಳಿವೆ. 'ಸ್ಕಂದ ಪುರಾಣ'ದಲ್ಲಿ 'ಪಂಪಾಮಹಾತ್ಮೆ'ಯ ವರ್ಣನೆ ಇದೆ. ಪಂಪಾಮಹಾತ್ಮೆಯಲ್ಲಿ ಹಂಪಿಯ ಪರಿಸರ ಹಾಗೂ ಕ್ಷೇತ್ರ ಮಹಿಮೆಯ ವರ್ಣನೆಯನ್ನು ಸಾಂಗವಾಗಿ ಚಿತ್ರಿಸಲಾಗಿದೆ. ಬ್ರಹ್ಮನ ಮಗಳಾದ ಪಂಪಾದೇವಿ, ಶಿವನನ್ನು ಮದುವೆಯಾಗಲು ಹೇಮಕೂಟದ ಉತ್ತರಕ್ಕಿರುವ ಅರ್ಧಕೋಶ ದೂರದಲ್ಲಿ ವಿಪ್ರಕೂಟವೆಂಬ ಪರ್ವತ

ಬಳಿಯ ಸರೋವರದ (ಪಂಪಾ ಸರೋವರ) ದಡದಲ್ಲಿ ಉಗ್ರವಾದ ತಪಸ್ಸನ್ನು ಆಚರಿಸುತ್ತಾಳೆ. ಅವಳ ತಪಸ್ಸಿಗೆ ಮೆಚ್ಚಿದ ಶಿವ ಅವಳ ಇಚ್ಛೆಯಂತೆ ವಿವಾಹವಾಗಿ ಪಂಪಾಪತಿ ಎನಿಸಿಕೊಳ್ಳುತ್ತಾನೆ. ಈ ಸ್ಥಳವನ್ನು ಪಂಪಾಕ್ಷೇತ್ರವೆಂದು ಕರೆದು, ಅವಳು ತಪಸ್ಸು ಮಾಡಿದ ಸರೋವರವನ್ನು ಪಂಪಾ ಸರೋವರವೆಂದು ಖ್ಯಾತಿಯಾಗಲೆಂದು ವರ ಕೊಡುತ್ತಾನೆ. ನಂತರ ಇದು ಪಂಪಾದೇವಿ, ಪಂಪಾಪತಿ, ಪಂಪಾಕ್ಷೇತ್ರ, ಪಂಪಾಸರೋವರ, ಪಂಪಾಪುರವೆಂಬ ಮೊದಲಾದ ಹೆಸರಿನಿಂದ ಪ್ರಖ್ಯಾತಿಯಾಯಿತು.

ಈ ಕ್ಷೇತ್ರದಲ್ಲಿ ಮೂರು ಕೋಟಿ ತೀರ್ಥಗಳಿದ್ದು, ಕಾಶಿಗಂಗೆಗೆ ಸಮಾನವೆನಿಸಿದ ತುಂಗಭದ್ರಾ ಎಂಬ ಪುಣ್ಯ ನದಿ ಹರಿಯುತ್ತದೆ. ಋಷಿಗಳ ಪೂರ್ವಾಶ್ರಮಗಳು ವಿರಾಜಿಸುತ್ತಿವೆ. ಇದು ಶಂಭುವಿನ ತಪೋಭೂಮಿಯೂ ಹೌದು. ಪಂಪಾಪತಿ, ಕಿನ್ನರೇಶ್ವರ, ಜಾಂಬವಂತೇಶ್ವರ, ಸೋಮನಾಥ, ಮಣಿಭದ್ರೇಶ್ವರ, ಈ ಪಂಚಲಿಂಗಗಳು ಭಕ್ತರಿಗೆ ಮುಕ್ತಿಗೊಳಿಸುವಂಥ ಸದಾಶಿವನ ಪಂಚಮುಖವಾಗಿ ಅವಿರ್ಭವಿಸಿ ಚಂದ್ರಾರ್ಕಾಗ್ನಿ ಕೋಟಿ ಪ್ರಕಾಶಗಳಿಂದ ಕಂಗೊಳಿಸುತ್ತದೆ. ಹೀಗೆ ಪೌರಾಣಿಕ ಶ್ರೇಷ್ಠತೆಯನ್ನು ಪಡೆದ ಈ ಕ್ಷೇತ್ರ ಧಾರ್ಮಿಕ, ಸಾಮಾಜಿಕವಾಗಿ ಮಹತ್ತ್ವ ಪಡೆಯುತ್ತ ರಾಜಕೀಯ ಚಟುವಟಿಕೆಗಳಿಗೆ ಎಡೆಮಾಡಿಕೊಟ್ಟಿತು.[೨]

ಬಾದಾಮಿ ಚಾಲುಕ್ಯರ ಪೂರ್ವದಲ್ಲಿಯೇ ಇಲ್ಲಿನ ನದಿ, ಪಂಪಾಸರೋವರವೆಂದು ಹೆಸರು ಪಡೆದಿತ್ತು. ಬಾದಾಮಿ ಚಾಲುಕ್ಯ ಅರಸ ವಿನಯಾದಿತ್ಯನ ಕ್ರಿ.ಶ. ೬೮೮ರ ತಾಮ್ರಪಟದಲ್ಲಿ 'ಪಂಪಾತಟ ಮಧಿವಸಾತಿ ವಿಜಯ ಸ್ಕಂಧಾವರೆ' ಎಂದು ಉಲ್ಲೇಖ ಬರುತ್ತದೆ. ಅಂದರೆ ಚಾಲುಕ್ಯರು ವಿಜಯದ ಬಿಡಾರವನ್ನು ಪಂಪಾನದಿಯ ದಂಡೆಯ ಮೇಲೆ ಬಿಡಲಾಗಿತ್ತೆಂದು ತಿಳಿಯುತ್ತದೆ. ಕ್ರಿ.ಶ. ೧೦೧೮ರಲ್ಲಿ ನೊಳಂಬ ಪಲ್ಲವ ಅರಸ ಉದಯಾದಿತ್ಯ ಕಂಪಿಲಿಯ ಸ್ಥಳದಿಂದ ಆಳ್ವಿಕೆ ಮಾಡುತ್ತಿದ್ದ. ಉತ್ತರಾಯಣ ಸಂಕ್ರಾಂತಿ ಪುಣ್ಯಕಾಲದಂದು ಪಂಪಾತೀರ್ಥಕ್ಕೆ ಬಂದು ಸೋಮಸಿಂಗ (ಘ) ಭಳಾರರ ಪಾದ ತೊಳೆದು ಬಾಗಳಿಯ ಕಲಿದೇವರಿಗೆ ದಾನ ಕೊಡುತ್ತಾನೆ. ಉದಯಾದಿತ್ಯದೇವನ ಆದೇಶದ ಮೇರೆಗೆ ಪೆರ್ಗಡೆ ನರಸಿಂಘಯ್ಯನು ಕಾಳಾಮುಖ ಪಂಡಿತ ಸೋಮಸಿಂಘ ಭಳಾರರೊಂದಿಗೆ ಬಾಗಳಿಗೆ ಬಂದು, ಅಲ್ಲಿಯ ಮಹಾಜನರ ಅಧ್ಯಕ್ಷತೆಯಲ್ಲಿ ಪಂಪಾಪುರತೀರ್ಥದಲ್ಲಿ ಅರಸನು ಮಾಡಿದ ದಾನವನ್ನು ಸ್ಥಳೀಯರ ಸಮ್ಮುಖದಲ್ಲಿ ಕೊಡುತ್ತಾನೆ.

ಕ್ರಿ.ಶ. ೧೦೪೮ರ ಮೊರಗೇರಿ ಶಾಸನದಲ್ಲಿ ತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವ ಪೆರ್ಮಾನಡಿ ದೇವನ ದಂಡನಾಯಕ ತಿಕಣ್ಣ ಮತ್ತು ಲೆಂಕಸಾಸಿರ್ವರು ಕಾರ್ತಿಕ ಹುಣ್ಣಿಮೆ ಸೋಮಗ್ರಹಣದ ದಿನ ಮೊರಗೇರಿಯಲ್ಲಿಯ ಭೂಮಿಯನ್ನು ಬಲ್ಲವರಸರಿಂದ ಪಡೆದು, ವಿರೂಪಾಕ್ಷದೇವರ ಸಮಕ್ಷಮದಲ್ಲಿ ನೊಳಂಬೇಶ್ವರ ದೇವರಿಗೆ ವಿದ್ಯಾಭ್ಯಾಸ ಮುಂತಾದವುಕ್ಕೆ ಸೋಮೇಶ್ವರ ಬೇವರ ಕಾಲು ತೊಳೆದು ಕೊಡುತ್ತಾರೆ.

ಕ್ರಿ.ಶ. ೧೧೬೩ರಲ್ಲಿ ಕಲಚೂರಿ ಅರಸ ಬಿಜ್ಜಳನು ಹಂಪಿಯ ವಿರೂಪಾಕ್ಷನ ಸನ್ನಿದಾನದಲ್ಲಿ ಮಹಾದಾನಗಳನ್ನು ಮಾಡುತ್ತಿದ್ದ ಸಂದರ್ಭದಲ್ಲಿ ಬೆಳ್ವಲನಾಡು ಮತ್ತು ವತ್ಸೆಯನಾಡಿನ ಅಧಿಕಾರಿ

ದಂಡನಾಯಕ ಅಮ್ಮಣಯ್ಯನು ಅರಸನ ಅನುಮತಿ ಪಡೆದು ಎಡೆಯಹಳ್ಳಿಯನ್ನು ಕುಕನೂರ ಮಲ್ಲಿಕಾರ್ಜುನ ದೇವರಿಗೆ ದಾನವಾಗಿ ಕೊಟ್ಟನು.

ಮೇಲಿನ ಮೂರು ಸಂದರ್ಭಗಳಲ್ಲಿ ಬಂದಿರುವ ವಿವರಣೆಯಿಂದ ಹಂಪಿಯ ಮತ್ತು ಪರಿಸರದ ಸುತ್ತಮುತ್ತಲಿನ ಸ್ಥಳೀಯ ದೇವಾಲಯಗಳಿಗೆ ದಾನ-ದತ್ತಿಗಳನ್ನು 'ಪಂಪಾತೀರ್ಥ' ಇಲ್ಲವೆ 'ವಿರೂಪಾಕ್ಷನ ಸನ್ನಿಧಿ'ಗೆ ಬಂದು ಕೊಡಲಾಗಿದೆ. ಇದರಿಂದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಇದೊಂದು 'ಪವಿತ್ರಕ್ಷೇತ್ರ' ವೆಂದು ಜನಮನದಲ್ಲಿ ಆಳವಾಗಿ ಬೇರೂರಿತ್ತು. ಹಂಪಿಯ ಕ್ರಿ.ಶ. ೧೯೯೯ರ ಶಾಸನದಲ್ಲಿ 'ಪಂಪಾತೀರ್ಥ', 'ಪಂಪಾವರಕ್ಷೇತ್ರ', 'ವಿರೂಪಾಕ್ಷತೀರ್ಥ' ಮತ್ತು 'ಹಂಪಾತೀರ್ಥ'ವೆಂದು ಉಲ್ಲೇಖಿಸಿ ಅದು ಗಂಗಾನದಿ ಯಿಂದ ಹಲವು ತೀರ್ಥಗಳಿಂದ, ಉತ್ತಮವಾದ ದೇವಾಲಯ, ಸಮಾಜದಿಂದ ಹಾಗೂ ತಪಸ್ವಿಗಳಿಂದ ಕೂಡಿತ್ತೆಂದು ವರ್ಣಿಸಿದೆ.

ಇಂಥ ಪವಿತ್ರ ಕ್ಷೇತ್ರದ ವಿರೂಪಾಕ್ಷತೀರ್ಥದ ರಕ್ಷಣಾರ್ಥವಾಗಿ ಸಾಮಂತ ಮಾದೆನಾಯಕನು, ಮತಂಗ ಪರ್ವತವನ್ನು ಪ್ರತಿಪಾಲಿಸುತ್ತಿದ್ದ. ಇವನ ಕೈಕೆಳಗಿದ್ದ ಮೈದುನ ಚೌಡಯ್ಯನೆಂಬುವವನು ಪಂಪಾದೇವಿಗೆ ಚಿಂಬೊನ್ನಿನ ಕಳಸವನ್ನು ಮಾಡಿಸಿ ವಿರೂಪಾಕ್ಷ, ಪಂಪಾದೇವಿ ಮತ್ತು ಭೈರವ ಗೃಹಗಳಿಗೆ ಸುಣ್ಣ ಬಳಸಿ, ಈ ದೇವಗೃಹಗಳಿಗೆ ಘಂಟೆ, ಅಡ್ಡಣಿಗೆ, ಆರತಿ, ಧೂಪಘಟ, ಪರ್ಯಾಣ, ಕಳಶ, ತಿಳಿವಟ್ಟಲು, ಚಂದನ, ಸುಗಂಧದ ಸಿಪ್ಪುಗಳಲ್ಲದೆ ಅನೇಕ ವಸ್ತ್ರಭೂಷಣಗಳನ್ನು ಕೊಟ್ಟನು. ವಿರೂಪಾಕ್ಷದೇವರ ಮತ್ತು ಪಂಪಾದೇವಿಯರ ನೈವೇದ್ಯಕ್ಕೆ ಅಕ್ಕಿ, ವಿರೂಪಾಕ್ಷದೇವರ ಛತ್ರದಲ್ಲಿ ೧೦ ಜನ ಬ್ರಾಹ್ಮಣರ ಭೋಜನಕ್ಕೆ ಹಾಗೂ ಪಂಪಾತೀರ್ಥದ ದೇವರುಗಳಿಗೆ ಅಡಿಕೆ, ಎಲೆ, ದಾನ ನೀಡಿದ್ದಾನೆ.[೩]

ಬಾದಾಮಿ ಚಾಲುಕ್ಯರಿಂದ ಕಳಚೂರಿಗಳ ಮಧ್ಯದ ಕಾಲಾವಧಿಯಲ್ಲಿ, ಹಂಪಿಯಲ್ಲಿ ಅನೇಕ ದೇವಾಲಯಗಳ ಸಮೂಹವೇ ನಿರ್ಮಾಣವಾಯಿತು. ದುರ್ಗಾ ದೇವಾಲಯದ ಸಮೂಹದಲ್ಲಿ ರಾಷ್ಟ್ರಕೂಟರ ವಾಸ್ತು ಲಕ್ಷಣಗಳುಳ್ಳ ದೇವಾಲಯಗಳಿವೆ. ಹಂಪಿಯಲ್ಲಿ ರಾಷ್ಟ್ರಕೂಟರ ಶಾಸನ ದೊರೆತಿಲ್ಲವಾದರೂ ಈ ಪರಿಸರದ ಸಂಡೂರು ಕುಮಾರಸ್ವಾಮಿಬೆಟ್ಟ, ಕುಡಿತಿನಿ, ಕೋಳಗಲ್ಲು, ಮುಂತಾದ ಸ್ಥಳಗಳಲ್ಲಿ ಅವರ ವಾಸ್ತು ರಚನೆಗಳೊಂದಿಗೆ ಶಾಸನಗಳೂ ಲಭ್ಯವಾಗಿವೆ. ಅವರ ಆಡಳಿತಕ್ಕೊಳಪಟ್ಟ ಹಂಪಿಯಲ್ಲಿ ಕಾಲಭೈರವ, ವಿರೂಪಾಕ್ಷ, ಹಂಪಾದೇವಿ, ಇತರ ದೇವಾಲಯಗಳು ಅವರ ಕಾಲಘಟ್ಟದಲ್ಲಿಯೇ ನಿರ್ಮಾಣವಾದವು. ವಿರೂಪಾಕ್ಷ ದೇವಾಲಯದ ವಾಸ್ತುಶಿಲ್ಪ ಅಧ್ಯಯನದಿಂದ ವಿದ್ವಾಂಸರು ಸಾಬೀತುಪಡಿಸಿದ್ದಾರೆ.

ಮುಂದೆ ವಿರೂಪಾಕ್ಷ ಹಂಪಿಯ ಪ್ರಮುಖ ದೇವತೆಯಾಗಿ, ಕಲ್ಯಾಣ ಚಾಲುಕ್ಯ, ಕಲಚೂರಿಗಳ ಕಾಲದಲ್ಲಿ ಈ ದೇವಾಲಯ ಜೀರ್ಣೋದ್ಧಾರ ಮತ್ತು ವಿಸ್ತಾರ ರೂಪವನ್ನು ಪಡೆದುಕೊಂಡಿತು. ಕುರುಗೋಡು ಸಿಂದರ ಶಾಸನದಲ್ಲೂ ಇದರ ಪ್ರಸ್ತಾಪವಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ 'ಹೇಮಕೂಟ'ದಲ್ಲಿ ಅನೇಕ ದೇವಾಲಯಗಳ ಸಮೂಹ ನಿರ್ಮಾಣವಾಯಿತು. ಹಂಪಿಯನ್ನೊಳಗೊಂಡು ಈ ಪ್ರದೇಶಕ್ಕೆ ಅಧಿಕಾರಿಗಳಾಗಿದ್ದ ಸಿಂದರು ತಮ್ಮ ರಾಜಧಾನಿ ಕುರುಗೋಡಿನಲ್ಲಿ 'ಹೇಮಕೂಟ'ದಲ್ಲಿರುವ ದೇವಾಲಯಗಳ ವಾಸ್ತುಲಕ್ಷಣಗಳುಳ್ಳ ಅನೇಕ ದೇವಾಲಯಗಳನ್ನು ನಿರ್ಮಿಸಿದರು. ಹಂಪಿಗೆ ವಿರೂಪಾಕ್ಷನೇ ಒಡೆಯನಾಗಿದ್ದ. ಆದರೆ ಅಧಿಕಾರಿಗಳು ಅದನ್ನು ಪ್ರತಿಪಾದಿಸುವ ಜವಾಬ್ದಾರಿಯನ್ನು ನಿರ್ವಹಿಸುತ್ತಿರುವಂತೆ ಶಾಸನದಲ್ಲಿ ಹೇಳಿಕೊಂಡಿದ್ದಾರೆ.

೧೨ನೆಯ ಶತಮಾನದ ವೇಳೆಗೆ ಕರ್ನಾಟಕದಲ್ಲಿಯೇ ಪ್ರಮುಖ ಧಾರ್ಮಿಕ ಕೇಂದ್ರವಾಗಿದ್ದ ಹಂಪಿ, ಅದರ ಅಧಿಪತಿ ವಿರೂಪಾಕ್ಷ, ಕವಿವರ್ಯರಿಂದಲೂ ಸ್ತುತಿಸಲ್ಪಟ್ಟನು. ಕನ್ನಡದ ಸುಪ್ರಸಿದ್ಧ ಕವಿಗಳಾದ ಹರಿಹರ ಮತ್ತು ರಾಘವಾಂಕರು ಅನೇಕ ಕೃತಿಗಳನ್ನು ರಚಿಸಿದರು. ಹರಿಹರನ ಮಹಾಕಾವ್ಯ 'ಗಿರಿಜಾಕಲ್ಯಾಣ', ಶಿವ ಮತ್ತು ಪಾರ್ವತಿಯರ ಮದುವೆ ವಸ್ತುವಾಗಿದೆ. ಅದು ಪಂಪಾ ವಿರೂಪಾಕ್ಷನ ವಂದಿಸುವ ಮೂಲಕ ಪ್ರಾರಂಭವಾಗಿ ಪುನಃ ಅದೇ ವಂದನೆಗಳೊಂದಿಗೆ ಮುಕ್ತಾಯವಾಗುತ್ತದೆ. ಕೃತಿಯ ಅನೇಕ ಪದ್ಯಗಳಲ್ಲಿ ವಿರೂಪಾಕ್ಷನನ್ನು ಹಂಪಿಯಾಳ್ವ ಇಲ್ಲವೆ ಹಂಪಿಯರಸನೆಂದು ಹೇಳಲಾಗಿದೆ. ಈತನ ಇನ್ನೊಂದು ಕೃತಿ 'ರಕ್ಷಾ ಶತಕ'ದಲ್ಲಿಯ ಪ್ರತಿ ಪದ್ಯವೂ "ಪಂಪಾಪುರದ ವಿರೂಪಾಕ್ಷ ರಕ್ಷಿಪುದೆನಂ"ದು ಮುಕ್ತಾಯವಾಗುತ್ತದೆ. ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ದ ಆರಂಭದಲ್ಲಿ ಪಂಪಾವಿರೂಪಾಕ್ಷರ ಸ್ತುತಿ ಇದೆ.

ಕಲಚೂರಿಗಳು ಹಾಗೂ ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯಗಳ ಅಂತ್ಯದೊಂದಿಗೆ ಕರ್ನಾಟಕದಲ್ಲಿ ಸೇವುಣ ಮತ್ತು ಹೊಯ್ಸಳರು ಅಧಿಕಾರಕ್ಕೆ ಬಂದರು. ತುಂಗಭದ್ರಾ ನದಿಯವರೆಗೆ ವಿಸ್ತಾರಗೊಂಡಿದ್ದ ಹೊಯ್ಸಳರ ಸಾಮ್ರಾಜ್ಯಕ್ಕೆ ಹಂಪಿಯೂ ಸೇರಿತ್ತು. ಹೊಯ್ಸಳ ಅರಸ ಸೋಮೇಶ್ವರ ಕ್ರಿ.ಶ. ೧೨೩೬ರಲ್ಲಿ ಪಂಪಾಕ್ಷೇತ್ರದ ವಿರೂಪಾಕ್ಷನ ಆರಾಧನೆಗಾಗಿ ಒಂದು ಹಳ್ಳಿಯನ್ನು ದಾನ ಕೊಟ್ಟಿದ್ದಾನೆ. ಇದೇ ಅರಸನ ಕಾಲದ ಕ್ರಿ.ಶ. ೧೨೩೮ರ ಹಾಸನ ಜಿಲ್ಲೆಯ ಯಲ್ಲೇಶ್ವರದ ಶಾಸನದಲ್ಲಿ ಭೀಮ್ಮಣ್ಣನೆಂಬುವನನ್ನು ಹೇಮಕೂಟದ ವಿರೂಪಾಕ್ಷದೇವರ ಪಾದಪದ್ಮಾಧಾರಕನೆಂದು ಸ್ತುತಿಸಲಾಗಿದೆ.

ಕುಮ್ಮಟದುರ್ಗದ ನಾಯಕರು ಹೊಯ್ಸಳರಿಗೆ ಅಧೀನರಾಗಿ ಆಡಳಿತ ನಡೆಸುತ್ತಿದ್ದರು. ಈ ಮನೆತನದ ಮುಮ್ಮಡಿ ಸಿಂಗೆನಾಯಕನ ಮಗ ವೀರಕಂಪಿಲರಾಯನು ಶಿವಾಲಯವನ್ನು ಕಟ್ಟಿಸಿ ಮೂರು ಲಿಂಗಗಳನ್ನು ಪ್ರತಿಷ್ಠಾಪನೆ ಮಾಡಿದ ಉಲ್ಲೇಖ ಹೇಮಕೂಟದ ಕಂಪಿಲರಾಯ ದೇವಾಲಯದ ಕಂಬದ ಮೇಲಿರುವ ಶಾಸನದಲ್ಲಿದೆ.

ಹೊಯ್ಸಳರ ರಾಜ್ಯವು, ದೆಹಲಿ ಸುಲ್ತಾನರ ದಾಳಿಯಿಂದ ನಾಶವಾದ ಮೇಲೆ ಹಂಪಿಗೆ ಬಂದು ಆಶ್ರಯ ಪಡೆದುಕೊಳ್ಳುತ್ತಾರೆ. ಕ್ರಿ.ಶ. ೧೩೩೧ರಲ್ಲಿ ಮೂರನೆಯ ಬಲ್ಲಾಳನು ಹಂಪಿಯನ್ನು ವಿರೂಪಾಕ್ಷ ಹೊಸದುರ್ಗವೆಂದು ಕರೆದು ಆಳ್ವಿಕೆ ಮಾಡುತ್ತಿದ್ದುದನ್ನು ಗುಬ್ಬಿ ಶಾಸನ ಉಲ್ಲೇಖಿಸುತ್ತದೆ. ಇವನ ಮಗನ ಹೆಸರು ವಿರೂಪಾಕ್ಷ ಬಲ್ಲಾಳ. ಈತನ ಯುವರಾಜ ಪಟ್ಟಾಭಿಷೇಕವೂ ಹಂಪಿಯಲ್ಲಿ ನಡೆಯಿತು. ಆರಂಭದಲ್ಲಿ ಹೊಯ್ಸಳರ ಆಡಳಿತ ಕೇಂದ್ರವಾದ ಹಂಪಿ ೧೩೩೬ರಲ್ಲಿ ವಿಜಯನಗರ ಅರಸರ ರಾಜಧಾನಿಯಾಗಿ ಇಡೀ ದಕ್ಷಿಣ ಭಾರತದಲ್ಲಿಯೇ ಪೆಸರುವಾಸಿಯಾಯಿತು.[*]

## ೩.೨. ಕಿಷ್ಕಿಂಧಾಕ್ಷೇತ್ರದ (ಆನೆಗುಂದಿ) ಚಾರಿತ್ರಿಕತೆ

ಹಂಪಿ ಪಂಪಾಕ್ಷೇತ್ರವೆಂದು ಹೆಸರು ಪಡೆದಂತೆ ಅದರ ಮಗ್ಗುಲಲ್ಲೆ ಕಿಷ್ಕಿಂಧಾಕ್ಷೇತ್ರವೆಂದು ಜನಮನದಲ್ಲಿ ಆಳವಾಗಿ ಬೇರೂರಿ ಅನೇಕ ಕಥೆ ಪುರಾಣಗಳು ಹುಟ್ಟಿಕೊಳ್ಳಲು ಕಾರಣವಾಯಿತು. ಆದಿಮಾನವ ಬಿಟ್ಟು ಹೋದ ಅವಶೇಷಗಳನ್ನು ರಾಮಾಯಣದಲ್ಲಿ ನಡೆದ ಘಟನೆಗಳಿಗೆ, ಅಲ್ಲಿ ಬರುವ

ಪ್ರಮುಖ ವ್ಯಕ್ತಿಗಳಿಗೆ ಹೋಲಿಕೆ ಕೊಟ್ಟು ಜನಮನದಿಂದ ದೂರವಾಗದಂತೆ ಪ್ರಚಾರಗಿಟ್ಟಿಸಲಾಯಿತು. ಇವು ಮುಂದೆ ಚಾರಿತ್ರಿಕ ಘಟನೆಗಳಂತೆ ರೂಪತಳೆದು ಶಾಸನಗಳಲ್ಲೂ ಉಲ್ಲೇಖವಾಗಿ, ವಿಜಯನಗರ ಕಾಲದಲ್ಲಿ ನಿರ್ಮಾಣವಾದ ವಾಸ್ತುಶಿಲ್ಪಕಲೆಯಲ್ಲಿ ಅನೇಕ ಸನ್ನಿವೇಶಗಳನ್ನು ಅಳವಡಿಸಲಾಯಿತು.

ಈ ಪರಿಸರದಲ್ಲಿ ನವಶಿಲಾಸಂಸ್ಕೃತಿಯ ಕಾಲಘಟ್ಟದಲ್ಲಿ ನಿರ್ಮಾಣವಾದ ಅನೇಕ ಬೂದಿ-ದಿಬ್ಬಗಳಿವೆ. ಅವುಗಳ ಆಕಾರವನ್ನು ಗಮನಿಸಿ ಪ್ರಮುಖ ವ್ಯಕ್ತಿಗಳನ್ನೊ, ರಾಕ್ಷಸರನ್ನೊ ದಹನ ಕ್ರಿಯೆ ಗೊಳಿಸಿದ್ದರಿಂದ ಉಂಟಾದವೆಂದು ನಂಬಲಾಗಿದೆ. ವೆಂಕಟಾಪುರದ 'ಬೂದಿದಿಬ್ಬ' ವಾಲಿಯನ್ನು ದಹಿಸಿದ್ದರಿಂದ ಹಾಗೂ ಕುಡತಿನಿಯ 'ಬೂದಿದಿಬ್ಬ' ರಾಮನ ಬಾಣದಿಂದ ಸಾವಿಗೀಡಾದ ರಾಕ್ಷಸನನ್ನು ದಹಿಸಿದ್ದರಿಂದ ಉಂಟಾದವುಗಳೆಂದು ಇಂದಿಗೂ ಪ್ರಚಾರ ಪಡೆದಿವೆ. ಹಂಪಿಯ ಪ್ರದೇಶದಲ್ಲಿ ಪ್ರಾಗೈತಿಹಾಸ ಕಾಲದಲ್ಲಿ ರಚನೆಯಾದ ಬಾಲವಿರುವ ಮನುಷ್ಯರ ಚಿತ್ರಗಳು 'ಕಿಷ್ಕಿಂಧಾಪುರ'ದಲ್ಲಿ ವಾಸವಾಗಿದ್ದ ವಾನರರ ಕಲ್ಪನೆಗೆ ಎಡೆಮಾಡಿಕೊಡುತ್ತವೆ. ಇಂಥ ಅವಶೇಷಗಳು ಮತ್ತು ಕಥೆ ಪುರಾಣಗಳ ಉಲ್ಲೇಖಗಳಿಂದ ಈ ಪರಿಸರದಲ್ಲಿ ಆಂಜನೇಯನ ದೇವಾಲಯಗಳು ಹೇರಳವಾಗಿ ನಿರ್ಮಾಣಗೊಂಡವು."

ಪಂಪಾಮಹಾತ್ಮೆಯಲ್ಲಿ 'ಮಾಲ್ಯವಂತಗಿರಿ', 'ಋಷ್ಯಮೂಕ', 'ಕಿಷ್ಕಿಂಧಾದ್ರಿ', 'ಹೇಮಕೂಟ', 'ವಿಪ್ರಕೂಟ', 'ಗಂಧರ್ವಗಿರಿ', 'ಜಂಭುನಾಥಗಿರಿ', 'ಸೋಮಪರ್ವತ', 'ಮಣಿಭದ್ರೇಶ್ವರ ಪರ್ವತ' ಮುಂತಾದವು ವಾಲ್ಮೀಕಿ ರಾಮಾಯಣದಲ್ಲಿ ಬರುವ ಹೆಸರುಗಳಿಗೆ ಪೂರಕವಾಗಿಯೇ ಇವೆ. ರಾಮಾಯಣ ದಲ್ಲಿ ಉಲ್ಲೇಖಗೊಂಡ ಕಾರ್ತಿಕೇಯ ತಪೋವನ ಕುಡಿತಿನಿಯಲ್ಲಿತ್ತು. ರಾಷ್ಟ್ರಕೂಟರಿಂದ ಹೊಯ್ಸಳರ ಕಾಲಾವಧಿಯಲ್ಲಿ ಇದು ಕಬ್ಬಿಣ ಉಪಕರಣಗಳನ್ನು ತಯಾರಿಸುವ ಕಾರ್ಯಗಾರವಾಗಿ ರೂಪುಗೊಂಡಿತು. ಅಲ್ಲದೆ ಕುಡಿತಿನಿ, ಸಂಡೂರು 'ಕುಮಾರಸ್ವಾಮಿ ಬೆಟ್ಟ' ಕಾರ್ತಿಕೇಯನ ಪ್ರಮುಖ ಸ್ಥಳಗಳಾಗಿ ಪ್ರಸಿದ್ಧಿ ಪಡೆದವು.

ಇಲ್ಲಿಯ ತುಂಗಭದ್ರಾ ನದಿ ದಂಡೆಯ ಮೇಲೆ 'ಪಂಪಾವನ', 'ಮಾನಸ ಸರೋವರ' ಹತ್ತಿರದ ಬೆಟ್ಟದಲ್ಲಿರುವ 'ಶಬರಿ ಗುಹೆ', 'ಅಂಜನಾದ್ರಿ', 'ಆನೆಗುಂದಿ' ಹತ್ತಿರ ಬಲಮುರಿಸಾಲಿನ ಒಂದು ಭಾಗ. ವಾಲಿಭಂಡಾರ ಹಾಗೂ ಈ ನದಿಯ ಇನ್ನೊಂದು ಭಾಗದಲ್ಲಿ 'ಸುಗ್ರೀವ ಗುಹೆ', 'ಸೀತೆಯ ಸೆರಗು', 'ಮತಂಗ ಪರ್ವತ', 'ಹೇಮಕೂಟ', 'ರತ್ನಕೂಟ' ಮೊದಲಾದವು ಕಂಡುಬರುತ್ತವೆ.

ಈ ಮೇಲಿನ ಸ್ಥಳಗಳಿಗೆ ಪೂರಕವೆಂಬಂತೆ ಬೆಳಗಾವಿ ಜಿಲ್ಲೆಯ ಶಿರಸಂಗಿ ಕಾಳಮ್ಮನ ಗುಡಿಯಲ್ಲಿರುವ ಶಾಸನದಲ್ಲಿ ಈ ರೀತಿಯ ಉಲ್ಲೇಖವಿದೆ. 'ಪೂರ್ವ-ಪಶ್ಚಿಮ', 'ವಿಂಧ್ಯ', 'ಕಿಷ್ಕಿಂಧಾ' ಈ ಮೂರು ಪರ್ವತಗಳು ಉನ್ನತವಾದವು. ಇವುಗಳಲ್ಲಿ ಅತ್ಯಂತ ಶ್ರೇಷ್ಠವಾದುದು, ಉತ್ತಮವಾದುದು ಎಂದರೆ ಕಿಷ್ಕಿಂಧಗಿರಿ. ಇದು ಜನನಿ ಬಿಡವಾದ ನಗರವಾಗಿತ್ತು. ಅದರಲ್ಲಿ ವಾಲಿ, ಮರುತ್ಸ, ಅಂಗದ, ದಿನೇಶ, ಮತಂಗ, ಹಂಸ, ಕಪಿಲ, ಶಾರ್ಗ, ಅಗಸ್ತ್ಯ, ವಿಭಾಂಡಕನ ಪುತ್ರ ಋಷ್ಯಶೃಂಗ ಮೊದಲಾದ ಋಷಿಗಳಿಗೆ ಆಶ್ರಯ ಸ್ಥಾನವಾಗಿತ್ತೆಂದು ವರ್ಣಿಸುತ್ತದೆ.

ಹಂಪಿಯಿಂದ ೧೦ ಕಿ.ಮೀ. ದೂರದಲ್ಲಿರುವ 'ದೇವಿಘಾಟ್' ಎಂಬಲ್ಲಿಯ ಕ್ರಿ.ಶ. ೧೧೭೮ರ ಶಾಸನದಲ್ಲಿ "ತುಂಗಭದ್ರಾ ತಟದ ಬಡಗ ಕಿಷ್ಕಿಂಧಾಮಿ ಪರ್ವತಂ' ಎಂಬ ಉಲ್ಲೇಖವಿದೆ. ೧೦-೧೨ನೆಯ

ಶತಮಾನದ ಶಾಸನಗಳಲ್ಲಿ ಹಂಪಿಯನ್ನು ಕಿಷ್ಕಿಂಧವೆಂದು ಕರೆದಿರುವುದರಿಂದ ಇದು ಸುಮಾರು ಐದು ನೂರು ವರ್ಷಗಳ ಹಿಂದಿನಿಂದಲೂ ಗುರುತಿಸಿಕೊಂಡಿರುವ ಸಾಧ್ಯತೆ ಇದೆ.[೬]

ಯಾವುದೇ ಒಂದು ಘಟನೆಗೆ ಮೂಲ ಪ್ರೇರಣೆ ಇದ್ದೇ ಇರುತ್ತದೆ. ಬಾಯಿಯಿಂದ ಬಾಯಿಗೆ ಕಥೆಯ ರೂಪದಲ್ಲಿ ಬಂದಂಥ ಈ ಕಾವ್ಯಗಳು ಭಾರತದಾದ್ಯಂತ ವಿಸ್ತಾರ ಪಡೆದುಕೊಳ್ಳಲು ಸಾಧ್ಯವಾಯಿತು. ಭವಭೂತಿ, ಕಾಳಿದಾಸ, ಮೊದಲಾದ ಕವಿಗಳು, ಶಿಲ್ಪಿಗಳು, ಚಿತ್ರ - ಸಂಗೀತಕಾರರು ಇತಿಹಾಸದುದ್ದಕ್ಕೂ ತಮ್ಮ ಕೃತಿಗಳಲ್ಲಿ ರಾಮಾಯಣದ ಸನ್ನಿವೇಶ, ಸಾರಾಂಶಗಳನ್ನು ಬಳಸಿಕೊಳ್ಳುವುದಕ್ಕೆ ಕಾರಣವಾಯಿತು.

ರಾಮಾಯಣ ಮಹಾಕಾವ್ಯದಲ್ಲಿರುವ ಸನ್ನಿವೇಶ ಮತ್ತು ಭೌಗೋಳಿಕ ಪರಿಸರವನ್ನು ಕೂಲಂಕುಷ ವಾಗಿ ಅಧ್ಯಯನ ಮಾಡಿದ ರಾಮದಾಸ, ಸರ್ದಾರ್‌ಕೈಬ್, ರಾಮದಾಸ ಹೀರಾಲಾಲ್, ಪರಮಶಿವ ಅಯ್ಯರ್, ಯುಪಿಷಹಾ, ಸಂಕಾಲಿಯಾ ಮೊದಲಾದವರು ಅಯೋಧ್ಯ, ಚಿತ್ರಕೂಟ, ಪಂಚವಟಿ, ಮಾರಿಚಾಶ್ರಮ, ಕಿಷ್ಕಿಂಧ, ಮತಂಗಾಶ್ರಮ, ಋಷ್ಯಮುಖ ಸಾಗರ ಮುಂತಾದ ಸ್ಥಳಗಳು ನರ್ಮದಾ ನದಿಯ ಉತ್ತರಕ್ಕೆ ಅರಣ್ಯಪರ್ವತಗಳಿಂದ ಕೂಡಿದ ಹಾಗೂ ಸವರರು, ಗೊಂಡಾ ಆದಿವಾಸಿಗಳಿರುವ ನಾಗಪುರ ಪ್ರದೇಶದಲ್ಲಿದ್ದವೆಂದೂ, ಓಬಲ್‌ಪುರದಿಂದ ಉತ್ತರಕ್ಕೆ ಸುಮಾರು ೨೦ ಕಿ.ಮೀ. ದೂರದಲ್ಲಿರುವ ಲಂಕೆಯೇ ರಾಮಾಯಣದ ಲಂಕೆಯಾಗಿತ್ತೆಂದೂ ಅಭಿಪ್ರಾಯಪಡುತ್ತಾರೆ. ಅಲ್ಲದೆ ರಾಮಾಯಣದಲ್ಲಿ ಉಲ್ಲೇಖವಾದ ಸಾಲವೃಕ್ಷ ಕಿಷ್ಕಿಂಧ ಭಾಗದಲ್ಲಿ ಮಾತ್ರ ಬೆಳೆಯುತ್ತಿದ್ದವು. ಆ ಎಲ್ಲಾ ಲಕ್ಷಣಗಳು ಈ ಪ್ರದೇಶದಲ್ಲಿರುವುದರಿಂದ ಇದೇ ದಂಡಕಾರಣ್ಯವಾಗಿತ್ತು. ಕರ್ನಾಟಕದ ಹಂಪಿ-ಆನೆಗುಂದಿ ಪ್ರದೇಶವನ್ನು ಕಿಷ್ಕಿಂಧವೆಂದು ಈಗಿನ ಶ್ರೀಲಂಕಾವನ್ನು ಲಂಕೆಯೆಂದು ತಪ್ಪಾಗಿ ತಿಳಿಯಲಾಯಿತೆಂದು ಹೇಳಿದ್ದಾರೆ.[೭]

ಹಂಪಿ - ಆನೆಗುಂದಿ ಪ್ರದೇಶದ ಭೌಗೋಳಿಕ ಲಕ್ಷಣ, ಮಹಾಕಾವ್ಯದಲ್ಲಿ ಉಲ್ಲೇಖವಾದ ಅನೇಕ ಹೆಸರುಗಳು, ಪ್ರಾಗೈತಿಹಾಸ ಕಾಲದ ಅವಶೇಷಗಳು, ಶಾಸನಗಳು ಮತ್ತು ಆ ಭಾಗದಲ್ಲಿ ಪ್ರಚಲಿತವಿರುವ ಕಥೆ ಪುರಾಣಗಳನ್ನು ಪರಿಶೀಲಿಸಿ ವ್ಯಾಪಕ ಅಧ್ಯಯನದ ಮೂಲಕ ಹಂಪಿ ಪ್ರಾಚೀನ ಕಿಷ್ಕಿಂಧವಾಗಿತ್ತೆಂದು ಡಾ. ಅ. ಸುಂದರ ಅವರು ತರ್ಕಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಇದುವರೆಗೆ ಅಧ್ಯಯನ ಕೈಗೊಂಡ ತಜ್ಞರ ಹೇಳಿಕೆಗಳನ್ನು ಗಮನದಲ್ಲಿಟ್ಟುಕೊಂಡು, ಆಕರಗಳ ಪರಿಶೀಲನೆ, ವಿಮರ್ಶೆಗಳೊಂದಿಗೆ ಪೂರಕ ಮಾಹಿತಿ ಸಂಗ್ರಹಿಸುವ ಮೂಲಕ ನಿಷ್ಪಕ್ಷಪಾತವಾದ ಆಳ ಅಧ್ಯಯನವಾಗಬೇಕಾಗಿದೆ. ಹೀಗೆ ಪ್ರಾಚೀನ ಹಂಪಿ, ಅದರ ಪರಿಸರದಲ್ಲಿ ಆದಿಮಾನವನ ವಾಸಸ್ಥಾನವಾಗಿ, ಪಂಪಾಕ್ಷೇತ್ರವಾಗಿ, ಕಿಷ್ಕಿಂಧವಾಗಿ ಮತ್ತು ರಾಜಧಾನಿ ಯಾಗಿ ಅನೇಕ ತಿರುವು ಪಡೆದುಕೊಂಡು ಇಡೀ ದಕ್ಷಿಣ ಭಾರತದಲ್ಲಿ ಜಗದ್ವಿಖ್ಯಾತಿಯನ್ನು ಪಡೆದು ಕೊಂಡಿತ್ತು ಎಂದು ವ್ಯಕ್ತವಾಗುತ್ತದೆ.[೮]

**ಟಿಪ್ಪಣಿಗಳು**

೧. ಮಹಾದೇವ.ಸಿ. ಮತ್ತು ಚಿನ್ನಸ್ವಾಮಿ ಸೋಸಲೆ (ಸಂ), (೨೦೦೬), ಹಂಪಿ ಅಂದು-ಇಂದು, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ : ೧-೧೧.

೨. ಸುಂದರ ಅ., (೧೯೯೯), ಕಿಷ್ಕಿಂಧೆ, ಶ್ರೀಶರಣರ ಸುವಾಸಿನಿ ಬಳಗ, ಹೊಸಪೇಟೆ; ಪುಟ : ೧೧-೧೬.

೩. ದೇವರಕೊಂಡಾರೆಡ್ಡಿ (ಸಂ), (೧೯೯೯), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ : ೧-೭.

೪. ಷೇಕ್ ಅಲಿ.ಬಿ. (ಸಂ), (೧೯೯೭), ಕರ್ನಾಟಕ ಚರಿತ್ರೆ ಸಂಪುಟ-೩, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ : ೧೧-೧೨.

೫. ಕೃಷ್ಣಪ್ಪ.ಎಂ.ವಿ., ಚನ್ನಬಸಪ್ಪ. ಎಸ್. ಪಾಟೀಲ., (೧೯೯೯), ವಿಜಯನಗರ ಅಧ್ಯಯನ ಸಂಪುಟ -೪, ಮೈಸೂರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಪುಟ : ೧-೩.

೬. ಚನ್ನಬಸಪ್ಪ.ಎಸ್. ಪಾಟೀಲ., (೧೯೯೬), ಕರ್ನಾಟಕ ಶಾಸನಗಳು ಸಂಪುಟ-೧, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಪುಟ : ೧.

೭. ಅದೇ., ಪುಟ : ೭-೮.

೮. ಸೂರ್ಯನಾಥ.ಯು.ಕಾಮತ್. (ಮು.ಸಂ.), (೧೯೪೮), ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-೧, ಪುಟ : ೨೧೮-೨೨೦.

•••

# ಅಧ್ಯಾಯ ನಾಲ್ಕು

# ಹಂಪಿ ಪರಿಸರದ ಐತಿಹ್ಯಗಳ ವರ್ಗೀಕರಣ ಮತ್ತು ವಿಶ್ಲೇಷಣೆ

---

# ಅಧ್ಯಾಯ ನಾಲ್ಕು

# ಹಂಪಿ ಪರಿಸರದ ಐತಿಹ್ಯಗಳ ವರ್ಗೀಕರಣ ಮತ್ತು ವಿಶ್ಲೇಷಣೆ

## ೪.೧. ಐತಿಹ್ಯಗಳ ವರ್ಗೀಕರಣ

ಹಂಪಿ ಪರಿಸರದ ಬಗೆಗೆ ಕ್ಷೇತ್ರಕಾರ್ಯ ಕೈಗೊಂಡಾಗ ಸಾಕಷ್ಟು ಐತಿಹ್ಯಗಳು ಲಭಿಸಿವೆ. ಅಧ್ಯಯನ ಮಾಡುವ ದೃಷ್ಟಿಯಿಂದ ಇವುಗಳನ್ನು ಮೂರು ರೀತಿಯಾಗಿ ವಿಭಜಿಸಿಕೊಂಡು ಅಧ್ಯಯನ ಮಾಡಬಹುದಾಗಿದೆ.

೧. ವ್ಯಕ್ತಿಪ್ರಧಾನ ಐತಿಹ್ಯಗಳು

೨. ಸ್ಥಳ ಪ್ರಧಾನ ಐತಿಹ್ಯಗಳು

೩. ಘಟನಾಪ್ರಧಾನ ಐತಿಹ್ಯಗಳು

### ೪.೧.೧. ವ್ಯಕ್ತಿಪ್ರಧಾನ ಐತಿಹ್ಯಗಳು

ಎಲ್ಲ ವ್ಯಕ್ತಿಗಳ ಬಗೆಗೂ ಐತಿಹ್ಯ ಹುಟ್ಟಿಕೊಳ್ಳುವುದಿಲ್ಲ. ಯಾವ ವ್ಯಕ್ತಿ ಅಸಾಮಾನ್ಯ ಸಾಧನೆಗಳನ್ನೆಸಗಿರುತ್ತಾನೋ, ತನ್ನ ತಾಳ್ಮೆ-ಸನ್ನಡತೆಗಳಿಂದಾಗಿ ಯಾರು ಪ್ರಖ್ಯಾತ ಅಥವಾ ಕುಖ್ಯಾತರಾಗಿರುತ್ತಾರೋ ಅಂಥವರ ಮೇಲೆ ಒಂದಿಲ್ಲಾದರೊಂದು ಐತಿಹ್ಯ ಹುಟ್ಟಿಕೊಳ್ಳುತ್ತದೆ. ಸಮಾಜಸೇವೆ, ಪರೋಪಕಾರ, ಸಾಹಸಕಾರ್ಯ, ಶೌರ್ಯಪ್ರದರ್ಶನ ಮೊದಲಾದ ಕಾರ್ಯಗಳನ್ನೆಸಗಿ ಪ್ರಖ್ಯಾತರಾದವರ ಬಗೆಗೂ; ಕಳ್ಳತನ, ಕೊಲೆ, ಸುಲಿಗೆ, ದರೋಡೆ, ವಿಧ್ವಂಸಕ ಕೃತ್ಯಗಳು - ಇತ್ಯಾದಿಗಳೆನ್ನಸಗಿ ಕುಖ್ಯಾತರೆನಿಸಿದವರ ಬಗೆಗೂ ಐತಿಹ್ಯಗಳು ಹುಟ್ಟಿಕೊಳ್ಳುವುದು ಸ್ವಾಭಾವಿಕ.

ಹಂಪಿ ಪರಿಸರದ ವ್ಯಕ್ತಿಪ್ರಧಾನ ಐತಿಹ್ಯಗಳಲ್ಲಿ ಅಸಾಮಾನ್ಯನಾದ ವ್ಯಕ್ತಿಯೊಬ್ಬನ ಸಾಧನೆಯ ನಿರೂಪಣೆ ಇರುತ್ತದೆ. ಐತಿಹ್ಯದ ವಿವರಗಳು ಈ ವ್ಯಕ್ತಿಯ ಸಾಧನೆಗೆ ಪೋಷಕವಾಗಿ ಬರುತ್ತವೆ. ಇಲ್ಲಿ ವ್ಯಕ್ತಿಯು ಹಂಪಿ ಪರಿಸರಕ್ಕೆ ಬದ್ಧನಾಗಿದ್ದರೂ ಹಂಪಿ ಪರಿಸರವನ್ನು ಮೀರಿ ಅವನ ವ್ಯಕ್ತಿತ್ವ ಕೆಲಸ ಮಾಡುತ್ತಿರುತ್ತದೆ.

ವ್ಯಕ್ತಿಪ್ರಧಾನ ಐತಿಹ್ಯಗಳನ್ನು ಎರಡು ರೀತಿಯಾಗಿ ವಿಭಜಿಸಬಹುದು.

ಅ. ಐತಿಹಾಸಿಕ ವ್ಯಕ್ತಿಗಳು

ಆ. ಪೌರಾಣಿಕ ವ್ಯಕ್ತಿಗಳು

ಹಂಪಿ ಪರಿಸರದ ಐತಿಹಾಸಿಕ ವ್ಯಕ್ತಿಗಳ ಬಗೆಗೆ ಕೆಳಗಿನ ಐತಿಹ್ಯಗಳು ಲಭಿಸುತ್ತವೆ.

೧. ತಳವಾರಪ್ಪನ ಕಲ್ಲು

೨. ತುಲಾಭಾರ

೩. ಸಾಸಿವೆಕಾಳು ಮತ್ತು ಕಡಲೆಕಾಳು ಗಣಪತಿಗಳು

೪. ಹೊಳೆ ಹೊನ್ನೂರು ಸ್ವಾಮಿ ದರ್ಗಾ

೫. ತೆನಾಲಿ ರಾಮನ ಮಂಟಪ

೬. ಕಂಪಣ್ಣ

೭. ಚಂಡಿಕೇಶ್ವರ

೮. ಹರಿಹರ ಹಾಘವಾಂಕರ ಬಗ್ಗೆ

೯. ಪುರಂದರದಾಸರ ಮಂಟಪ

ಹಂಪಿ ಪರಿಸರದಲ್ಲಿ ಈ ಕೆಳಗಿನ ಪೌರಾಣಿಕ ವ್ಯಕ್ತಿಗಳ ಬಗೆಗೆ ಐತಿಹ್ಯಗಳು ಲಭಿಸುತ್ತವೆ.

೧. ಉಗುಳುದಮ್ಮಲ ಮಾರಿ

೨. ಮೂಲ ವಿರೂಪಾಕ್ಷ ಕಥೆ

೩. ಪಟ್ಟಣದ ಎಲ್ಲಮ್ಮ

೪. ಹನುಮನ ಸೆಳೆವು

೫. ಚಿತ್ರಾಂಗಿ, ರತ್ನಾಂಗಿ ಮಹಲ್ / ಕಮಲಮಹಲ್

೬. ಹೊಸೂರಮ್ಮದೇವಿ (ರೇಣುಕೆ)

೭. ಉಗ್ರನರಸಿಂಹ / ಲಕ್ಷ್ಮೀನರಸಿಂಹ

೮. ಉದ್ದಾನವೀರಭದ್ರ

೯. ಯಂತ್ರೋದ್ಧಾರಕ

೧೦. ಹನುಮ ಪಾದ

### ೪.೧.೨. ಸ್ಥಳಪ್ರಧಾನ ಐತಿಹ್ಯಗಳು

ಪ್ರಾಕೃತ, ಭೌಗೋಳಿಕ ಇಲ್ಲವೆ ಪ್ರಾದೇಶಿಕ ವೈಶಿಷ್ಟ್ಯ - ಸ್ವರೂಪಗಳೇ ಕಾರಣವಾಗಿ ಒಂದು ಸ್ಥಳಕ್ಕೆ ಅನ್ವರ್ಥನಾಮವು ಸಿದ್ಧಿಸುವುದುಂಟು. ವ್ಯಕ್ತಿ, ಪ್ರಾಣಿ-ಪಕ್ಷಿಗಳ ಕಾರಣದಿಂದಾಗಿ ನಿರ್ದಿಷ್ಟ ಸ್ಥಳವೊಂದ ರಲ್ಲಿ ಘಟಿಸಿದ ವಿಶಿಷ್ಟ ಘಟನೆಗಳಿಂದಲೂ ಆ ಸ್ಥಳಕ್ಕೆ ಹೆಸರಾಗುವುದುಂಟು. ಒಂದು ನಿರ್ದಿಷ್ಟ ಸ್ಥಳಕ್ಕೆ

ಸಂಬಂಧಪಟ್ಟ ವ್ಯಕ್ತಿಗಳು ಶೌರ್ಯ, ಸಾಹಸ, ಸಮಾಜಸೇವೆ, ಪ್ರಾಮಾಣಿಕತೆಗಳಿಂದ ಪ್ರಸಿದ್ಧರಾಗಿದ್ದರೆ ಅಂಥವರ ಹೆಸರುಗಳಿಂದಲೇ ಆ ಸ್ಥಳವು ಗುರುತಿಸಲ್ಪಡುವುದು ಉಂಟು.

ಈ ಬಗೆಯ ಐತಿಹ್ಯಗಳಲ್ಲಿ ಸ್ಥಳಕ್ಕೆ ಮಹತ್ತ್ವ ಇರುತ್ತದೆ. ಇಲ್ಲಿ ವ್ಯಕ್ತಿಗಳಿಗೆ ಸ್ಥಾನವಿದ್ದರೂ ಪ್ರಕೃತಿಗೆ ಹೆಚ್ಚಿನ ಒತ್ತು ನೀಡಲಾಗುತ್ತಿದೆ. ಸ್ಥಳದ ವಿಶಿಷ್ಟತೆ ಅಥವಾ ಅಸಾಮಾನ್ಯತ್ವವೇ ಈ ಐತಿಹ್ಯಗಳಿಗೆ ತಳಹದಿಯಾಗಿ ಕೆಲಸ ಮಾಡುತ್ತಿರುತ್ತದೆ.

ಈ ಕೆಳಗಿನ ಸ್ಥಳಪ್ರಧಾನ ಐತಿಹ್ಯಗಳು ಹಂಪಿ ಪರಿಸರದಲ್ಲಿ ಲಭಿಸುತ್ತವೆ.

೧. ಕೋಟಿಲಿಂಗ

೨. ಗಗನ ಮಹಲ್

೩. ದುರ್ಗಾದೇವಿಬೆಟ್ಟ ಅಥವಾ ಘಟ್ಟಿಕೋಟೆ

೪. ದುಂದುಭಿ ಗುಹೆ

೫. ಶಬರಿ ಗುಹೆ

೬. ರಾಯರಕೆರೆ

೭. ಪಂಪಾ ಸರೋವರ

೮. ಸುಗ್ರೀವ ಗುಹೆ

೯. ಹೇಮಕೂಟ

೧೦. ವಾಲಿಕಾಷ್ಟ

೧೧. ಕನ್ನೇರಮ್ಮನ ಬಾವಿ

೧೨. ಧರ್ಮರಗುಡ್ಡ

೧೩. ಅಂಜನಾದ್ರಿ ಪರ್ವತ

೧೪. ಮಾಲ್ಯವಂತ ಪರ್ವತ

೧೫. ಋಷ್ಯಮೂಕ ಪರ್ವತ

೧೬. ಮಾತಂಗ ಪರ್ವತ

೧೭. ಮಾಸ್ಲಯ್ಯನ ಗುಡ್ಡ

೧೮. ಸೂಳೆ ಬಜಾರ್

೧೯. ಕೋತಿ ಇನಾಮು

೨೦. ಕಾಮಲಾಪುರ ಕೆರೆ ಏರಿ

೨೧. ವಾಲಿ ಭಂಡಾರ

೨೨. ವಿರೂಪಾಕ್ಷ ಬಜಾರು

೨೩. ಪಾನ್ ಸುಪಾರಿ ಬಜಾರು

೨೪. ವಿಠ್ಠಲ ಬಜಾರು

೨೫. ಕೃಷ್ಣ ಬಜಾರು

೨೬. ನವ ವೃಂದಾವನ

೨೭. ಚಿಂಚಲ ಕೋಟೆ

೨೮. ಇನಾಮು ಭೂಮಿಗಳು

೨೯. ಕಲ್ಲಿನ ರಥ

೩೦. ಕಾವಲುಗಾರರ ಗೋಪುರ

೩೧. ಆನೆ ಲಾಯ (ಗಜ ಶಾಲೆ)

೩೨. ಕುದುರೆ ಲಾಯ

೩೩. ಪುಷ್ಕರಣಿ (ಮೆಟ್ಟಿಲುಗಳ ಕೊಳ)

೩೪. ನೆಲಮಾಳಗಿ (ಗುಪ್ತ ವಿಚಾರ ಚರ್ಚೆಯ ಸ್ಥಳ

೩೫. ಕಲ್ಲಿನ ಸೇತುವೆ

೩೬. ಭೋಜನ ಶಾಲೆ

೩೭. ಕಡ್ಡಿರಾಂಪುರ

೩೮. ಕಮಲಾಪುರ

೩೯. ಅನಂತಶಯನ ಗುಡಿ

೪೦. ಒಳ ಕಾಲಿನ ಮಂಟಪ

೪೧. ಮಹಾನವಮಿ ದಿಬ್ಬ

೪೨. ದಣಾಯಕನ ನಿವಾಸ

೪೩. ಭೀಮನ ಹೆಬ್ಬಾಗಿಲು

೪೪. ಗೆಜ್ಜಲು ಮಂಟಪ (ಪರಾಂಕುಶ ಮಂಟಪ)

೪೫. ಮಹಮ್ಮದೀಯರ ಗೋರಿಗಳು

೪೬. ರಾಣಿಯರ ಸ್ನಾನಗೃಹ

೪೭. ಸೂಳೆ ಬಾವಿ

ಹಂಪಿಯಲ್ಲಿರುವ ಕಲ್ಲಿನ ರಥವು ಓರಿಸ್ಸಾ ಮತ್ತು ತಮಿಳುನಾಡಿನ ರಥಗಳಿಗಿಂತ ವಿಶಿಷ್ಟ ರೀತಿಯಲ್ಲಿ ರುವುದು. ವಿವಿಧಡೆಯಿಂದ ಬಂದ ಪ್ರವಾಸಿಗರ ಅಭಿಪ್ರಾಯದಿಂದ ತಿಳಿದುಬರುತ್ತದೆ. ರಥದ ಮೇಲೆ ಇಟ್ಟಿಗೆಯಿಂದ ನಿರ್ಮಿಸಿದ ಗೋಪುರವಿತ್ತೆಂದು ನಿರೂಪಕರು ಹೇಳುತ್ತಾರೆ. ಈ ಮಾತಿಗೆ ಪುಷ್ಟಿ ನೀಡುವಂತೆ ೧೮೬೫ರಲ್ಲಿ ಅಲೆಕ್ಸಾಂಡರ್ ಗ್ರೀನ್ ಲಾ ಅವರು ತೆಗೆದಿರುವ ಛಾಯಾಚಿತ್ರದಿಂದ ರಥದ ಮೇಲೆ ಇಟ್ಟಿಗೆ ಯಿಂದ ನಿರ್ಮಿಸಿರುವ ಗೋಪುರ ಇತ್ತೆಂದು ತಿಳಿದುಬರುತ್ತದೆ.

### ೩೦. ಕಾವಲುಗಾರರ ಗೋಪುರ

ರಾಣಿಯರ ಅಂತಃಪುರವನ್ನು ಕಾವಲು ಕಾಯಲಿಕ್ಕಾಗಿ ಇದ್ದಂತಹ ಎತ್ತರವಾದ ಗೋಪುರವಿರುವ ಸ್ಥಳಗಳನ್ನು 'ಕಾವಲುಗಾರರ ಗೋಪುರ' ಎಂದು ಕರೆಯುತ್ತಾರೆ. ಈ ಕಾವಲು ಕಾಯುವ ವೃತ್ತಿಯನ್ನು ಸ್ತ್ರೀ ಸೈನ್ಯದಳವು ಮಾಡುತ್ತಿತ್ತೆಂದು ತಿಳಿದುಬರುತ್ತದೆ. ಈ ಕಾವಲು ಗೋಪುರಗಳನ್ನು ದೂರದಲ್ಲಿ ಬರುವ ಮತ್ತು ಹೋಗುವವರನ್ನು ನೋಡಲು ಅನುಕೂಲವಾಗಲಿ ಎಂದು ಅಂದಿನ ಅರಸರು ಕಟ್ಟಿಸಿದ್ದಾರೆ ಎಂದು ತಿಳಿದುಬರುತ್ತದೆ. ಈ ಕಾವಲು ಗೋಪುರಗಳು ರಾಣಿಯರ ಸುರಕ್ಷತೆಗಾಗಿದ್ದು, ಶತ್ರು ಸೈನ್ಯವು ಗುಪ್ತವಾಗಿ ಕೋಟೆಯ ಒಳಗಡೆ ನುಗ್ಗಬಹುದೆಂಬ ಭೀತಿಯಿಂದ ಸ್ತ್ರೀ ಸೈನಿಕರು ಹಗಲು ರಾತ್ರಿ ಎನ್ನದೇ ಈ ಕಾವಲುಗೋಪುರದಲ್ಲಿ ಸದಾ ಎಚ್ಚರಿಕೆಯಿಂದ ಇರುತ್ತಿದ್ದರೆಂದು ನಿರೂಪಕರು ಮಾಹಿತಿಯನ್ನು ನೀಡುತ್ತಾರೆ. ಈ ಕಾವಲುಗಾರರ ಗೋಪುರಗಳು ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪದಿಂದ ನಿರ್ಮಿಸಿರುವುದ ರಿಂದ ಈ ಗೋಪುರಗಳಿಗೆ ಯಾವುದೇ ದಕ್ಕೆಗೆ ಗುರಿಯಾಗದೇ ಉಳಿದುಕೊಂಡು ಬಂದಿರುವುದನ್ನು ನಾವು ಈಗಲೂ ಕಾಣಬಹುದು.

### ೩೧. ಆನೆ ಲಾಯ (ಗಜ ಶಾಲೆ)

ರಾಣಿಯರ ಅಂತಃಪುರ ಕೋಟೆಯ ಹೊರಭಾಗದಲ್ಲಿ ಆನೆಲಾಯ ಕಂಡುಬರುತ್ತದೆ. ಈ ಲಾಯವು ೧೧ ಕೊಠಡಿಗಳಿಂದ ಕೂಡಿದ್ದಾಗಿದೆ. ವಿಜಯನಗರದ ಅರಸರು 'ವಿಜಯದಶಮಿ ಹಬ್ಬ'ವನ್ನು ಅತ್ಯಂತ ವಿಜೃಂಭಣೆಯಿಂದ ಮಹಾನವಮಿದಿಬ್ಬ ಪ್ರದೇಶದಲ್ಲಿ ಆಚರಿಸುತ್ತಿದ್ದರು. ಈ ಉತ್ಸವಗಳಲ್ಲಿ ಆನೆಗಳನ್ನು ಬಳಸುತ್ತಿದ್ದರು. ಆನೆಗಳು ಇರಲಿಕ್ಕಾಗಿ ಆನೆಲಾಯವನ್ನು ಅಂದಿನ ಅರಸರು ಕಟ್ಟಿಸಿದರೆಂದು ತಿಳಿದು ಬರುತ್ತದೆ. ಈ ಆನೆಲಾಯದಲ್ಲಿ ಎಡಭಾಗದಲ್ಲಿ ೫ ಪಟ್ಟದ ಆನೆ, ಬಲಭಾಗದಲ್ಲಿ ೫ ಪಟ್ಟದ ಆನೆ. ಮಧ್ಯದಲ್ಲಿ ಅಂಬಾರಿಯನ್ನು ಹೊರುವ ಆನೆಯನ್ನು ಕಟ್ಟುತ್ತಿದ್ದರಂತೆ. ಈ ಆನೆಲಾಯವು ಇಂದಿಗೂ ಸುಸ್ಥಿತಿಯಲ್ಲಿರುವುದನ್ನು ನಾವು ಕಾಣಬಹುದು.

### ೩೨. ಕುದುರೆ ಲಾಯ

ಆನೆ ಲಾಯದ ಎದುರಗಡೆ ಸಾಲು ಮಂಟಪಗಳಿಂದ ನಿರ್ಮಿಸಲ್ಪಟ್ಟಿದ್ದ ಸ್ಥಳವನ್ನು 'ಕುದುರೆ ಲಾಯ' ಎಂದು ಕರೆಯಲಾಗಿದೆ. ಈ ಕುದುರೆ ಲಾಯದಲ್ಲಿ ಕೃಷ್ಣದೇವರಾಯನ ಮುಖ್ಯವಾದ ಕುದುರೆಗಳನ್ನು ಕಟ್ಟುತ್ತಿದ್ದರಂತೆ. ಕೃಷ್ಣದೇವರಾಯನ ಕಾಲದಲ್ಲಿ ೩,೦೦೦ ಆನೆಗಳು, ೫,೦೦೦ ಕುದುರೆಗಳಿದ್ದವಂತೆ.

ಆದರೆ ಈ ಕುದುರೆ ಲಾಯವು ಸಂಪೂರ್ಣವಾಗಿ ನಾಶವನ್ನು ಹೊಂದಿದೆ. ಆನೆ ಲಾಯವನ್ನು ನಾಶ ಮಾಡದೇ ಈ ಕುದುರೆ ಲಾಯವನ್ನು ಏಕೆ ಸಂಪೂರ್ಣವಾಗಿ ನಾಶ ಮಾಡಿರುವರು ಎಂಬ ಪ್ರಶ್ನೆಗೆ ನಿರೂಪಕರು ಬಹುಮನಿ ಸುಲ್ತಾನರ ದಾಳಿಗೆ ಸಿಕ್ಕ ವಿಜಯನಗರವು ಮುಸ್ಲಿಂ ಶೈಲಿಯ ಕಟ್ಟಡಗಳನ್ನು ನಾಶ ಮಾಡದೇ, ಹಿಂದೂ ಶೈಲಿಯ ಕಟ್ಟಡಗಳನ್ನು ಮಾತ್ರ ನಾಶ ಮಾಡಿದರು. ಇಲ್ಲಿ ಆನೆ ಲಾಯವು ಮುಸ್ಲಿಂ ಶೈಲಿಯ ಕಟ್ಟಡವನ್ನು ಹೊಂದಿದೆ. ಕುದುರೆ ಲಾಯವು ಹಿಂದೂ ಶೈಲಿಯ ಕಟ್ಟಡವನ್ನು ಹೊಂದಿರುವುದೇ ಇದಕ್ಕೆ ಕಾರಣ ಎಂದು ಮಾಹಿತಿ ನೀಡುತ್ತಾರೆ.

### ೩೩. ಪುಷ್ಕರಣಿ (ಮೆಟ್ಟಿಲುಗಳ ಕೊಳ)

ಪುಷ್ಕರಣಿಯು 'ಮಹಾನವಮಿ ದಿಬ್ಬ'ದ ಹಿಂದೆ ಕಂಡುಬರುತ್ತದೆ. ಈ ಕೊಳವು ಮುಚ್ಚಿ ಹೋಗಿತ್ತು. ಉತ್ಖನನದ ಮೂಲಕ ಇತ್ತೀಚೆಗೆ ಹೊರ ತೆಗೆಯಲಾಗಿದೆ. ಈ ಪುಷ್ಕರಣಿಯು ರಾಜಪರಿವಾರದವರ ಧಾರ್ಮಿಕ ಉದ್ದೇಶಗಳಿಗಾಗಿ ನಿರ್ಮಿಸಿರಬೇಕೆಂಬ ಪ್ರತೀತಿ ಇದೆ. ಈ ಪುಷ್ಕರಣಿಗೆ ಕಪ್ಪುಶಿಲೆಯನ್ನು ಬಳಸಿ ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ಆದ್ದರಿಂದ ಇದನ್ನು 'ಕರಕಲ್ಲಿನ ಪುಷ್ಕರಣಿ' ಎಂದು ಸ್ಥಳೀಯರು ಕರೆಯುತ್ತಾರೆ. ಈ ಕೊಳಕ್ಕೆ ನೀರನ್ನು ಬಾವಿಯಿಂದ ಸರಬರಾಜು ಮಾಡಲಾಗುತ್ತಿತ್ತು. ವಿಜಯದಶಮಿ ಉತ್ಸವವನ್ನು ವಿಜಯನಗರದ ಅರಸರು ಅತ್ಯಂತ ವಿಜೃಂಭಣೆಯಿಂದ ಆಚರಿಸುತ್ತಿದ್ದರು. ಈ ವಿಜೃಂಭಣೆಯ ಉತ್ಸವವನ್ನು ವೀಕ್ಷಿಸಲು ಬೇರೆ ಬೇರೆ ಪ್ರಾಂತ್ಯಗಳಿಂದ ಅರಸರು, ಪ್ರವಾಸಿಗರು ಬರುತ್ತಿದ್ದರು. ಅವರಿಗೆಲ್ಲಾ ನೀರಿನ ಸೌಕರ್ಯವನ್ನು ಕಲ್ಪಿಸುವುದಕ್ಕಾಗಿ ಈ 'ಪುಷ್ಕರಣಿ'ಯನ್ನು ನಿರ್ಮಿಸಿರಬೇಕೆಂಬ ನಂಬಿಕೆ ಇದೆ.

### ೩೪. ನೆಲಮಾಳಗಿ (ಗುಪ್ತ ವಿಚಾರ ಚರ್ಚೆಯ ಸ್ಥಳ)

ರಾಜನ ಅಂತಃಪುರದ ಆವರಣದಲ್ಲಿ ಈ ನೆಲಮಾಳಿಗೆ ಕಂಡುಬರುತ್ತದೆ. ಈ ನೆಲಮಾಳಿಗೆಯನ್ನು ಶ್ರೀಕೃಷ್ಣದೇವರಾಯನು ನಿರ್ಮಿಸಿದನೆಂದು ತಿಳಿದುಬರುತ್ತದೆ. ಈ ನೆಲಮಾಲಿಗೆಯಲ್ಲಿ ರಾಜರು ಮತ್ತು ಮಂತ್ರಿಗಳು ಗುಪ್ತ ವಿಚಾರಗಳನ್ನು ಚರ್ಚಿಸುತ್ತಿದ್ದರಂತೆ. ಈ ನೆಲಮಾಳಿಗೆಯು ಈಗಲೂ ಸುಸ್ಥಿತಿಯಲ್ಲಿದ್ದು ಒಳಗಡೆ ಕತ್ತಲಿನಿಂದ ಕೂಡಿರುವುದನ್ನು ನಾವು ಕಾಣಬಹುದು. ಇಂತಹ ನೆಲಮಾಳಿಗೆಗಳು ಹಂಪಿ ಪರಿಸರದಲ್ಲಿ ಸಾಕಷ್ಟು ಇದ್ದು ಅವು ಮುಚ್ಚಿಕೊಂಡು ಹೋಗಿವೆಯಂತೆ ಎಂದು ನಿರೂಪಕರು ತಿಳಿಸುತ್ತಾರೆ.

### ೩೫. ಕಲ್ಲಿನ ಸೇತುವೆ

ಪುರಂದರ ಮಂಟಪದ ಮುಂದೆ ತುಂಗಭದ್ರಾ ನದಿಯಲ್ಲಿ ಸಾಲು ಕಂಬಗಳು ನಿಂತಿರುವುದನ್ನು ಕಾಣುತ್ತೇವೆ. ಇವು ಗ್ರಾನೈಟ್ ಕಲ್ಲುಗಳಾಗಿದ್ದು ಇದನ್ನು ಕಲ್ಲಿನ ಸೇತುವೆ ಎಂದು ಕರೆಯಲಾಗಿದೆ. ಈ ಸೇತುವೆಯು ೧ ಕಿ.ಮೀ.ನಷ್ಟು ವಿಸ್ತೀರ್ಣವನ್ನು ಹೊಂದಿದೆ. ಈ ಸೇತುವೆ ಕಟ್ಟಲು ಕಾರಣ ವಿಜಯನಗರವು ವ್ಯಾಪಾರದಿಂದ ಆರ್ಥಿಕವಾಗಿ ದೇಶ-ವಿದೇಶಗಳಿಗೆ ಚಿರಪರಿಚಿತವಾಗಿತ್ತು. ಸಹಜವಾಗಿ ವ್ಯಾಪಾರಿಗಳು ವಿಜಯನಗರಕ್ಕೆ ಬಂದು ವ್ಯಾಪಾರ ಮಾಡುತ್ತಿದ್ದರು. ಆದರೆ ಅವರಿಗೆ ಬರಲು ತುಂಗಭದ್ರಾ ನದಿ ಅಡ್ಡವಾಗಿತ್ತು. ಬಹಳಷ್ಟು ವ್ಯಾಪಾರಿಗಳು. ಇದರಿಂದ ನಿರಾಸೆಗೊಂಡು ರಾಜನಿಗೆ ಸೇತುವೆ ನಿರ್ಮಿಸಲು ಮನವಿ ಮಾಡಿಕೊಂಡರು. ಅವರ ಮನವಿಯಂತೆ ರಾಜನು ಈ ಕಲ್ಲಿನ ಸೇತುವೆಯನ್ನು ನಿರ್ಮಿಸಿದನು

ಎಂಬ ನಂಬಿಕೆ ಒಂದಡೆಯಾದರೆ, ಶ್ರೀ ಕೃಷ್ಣದೇವರಾಯನು ತನ್ನ ಪಟ್ಟದರಸಿಯರೊಂದಿಗೆ ಕಿಷ್ಕಿಂಧಾ ಕ್ಷೇತ್ರದ 'ಅಂಜನಾದ್ರಿ ಪರ್ವತಕ್ಕೆ' ತ್ರಿಕಾಲ ಪೂಜೆ ಮಾಡಿಸಿಕೊಂಡು ಬರುತ್ತಿದ್ದನಂತೆ. ಅರಸನು ತನ್ನ ರಾಣಿಯರೊಂದಿಗೆ ಅಲ್ಲಿಗೆ ಹೋಗಿ ಪೂಜೆ ಮಾಡಿಸಿಕೊಂಡು ಬರಬೇಕಾದರೆ ತುಂಗಭದ್ರಾ ನದಿಯನ್ನು ದಾಟಬೇಕಾಗಿತ್ತು. ಈ ಅಡಚಣೆಯನ್ನು ಸರಿದೂಗಿಸುವ ಕಾರಣದಿಂದ ಕಲ್ಲಿನ ಸೇತುವೆಯನ್ನು ನಿರ್ಮಿಸಿದ ನೆಂಬ ನಂಬಿಕೆ ಇದೆ. ಈ ಸೇತುವೆಯು ಅತ್ಯಂತ ಗಟ್ಟಿಯಾಗಿತ್ತೆಂಬುದಕ್ಕೆ ಆನೆ, ಕುದರೆಗಳ ಮೇಲೆ ರಾಜನು ಸವಾರಿ ಮಾಡುತ್ತಿದ್ದನಂತೆ.

### ೩೬. ಭೋಜನ ಶಾಲೆ

ಕಮಲಾಪುರದಿಂದ ಹಂಪಿಗೆ ಹೋಗುವ ಮಾರ್ಗದಲ್ಲಿ ನೀರಿನ ಅರವಟ್ಟಿಗೆಯ ಎದುರಿನ ತೋಟದ ಸಣ್ಣ ಕಾಲುವೆಯೊಂದರ ಇಕ್ಕೆಲಗಳಲ್ಲಿ ಕಲ್ಲಿನ ತಟ್ಟೆಗಳು ಕಂಡುಬರುತ್ತವೆ. ಇದನ್ನು 'ಭೋಜನ ಶಾಲೆ'ಯ ಪ್ರದೇಶವೆಂದು ಕರೆಯುತ್ತಾರೆ. ಈ ತಟ್ಟೆಗಳ ಕುರಿತು ಬಗೆ ಬಗೆಯ ನಿರೂಪಣೆಗಳಿವೆ.

ಕೆಲವರ ಪ್ರಕಾರ, ಈ ಕಲ್ಲಿನ ತಟ್ಟೆಗಳನ್ನು ಯುದ್ಧ ಖೈದಿಗಳ ಊಟಕ್ಕಾಗಿ ಬಳಸಲಾಗುತ್ತಿತ್ತಂತೆ. ವಿಜಯನಗರದ ಅರಸರು ಯುದ್ಧದಲ್ಲಿ ಗೆದ್ದು ಬರುವಾಗ ಜೊತೆಗೆ ಕರೆತರುವ ಖೈದಿಗಳನ್ನು ಹಂಪಿಯಲ್ಲಿ ವಿವಿಧ ಕೆಲಸಗಳಿಗಾಗಿ ಉಪಯೋಗಿಸುತ್ತಿದ್ದರು. ಇಂಥ ಖೈದಿಗಳಿಗೆ ಸಾಮೂಹಿಕವಾಗಿ ಈ ಕಲ್ಲಿನ ತಟ್ಟೆಗಳಲ್ಲಿ ಊಟ ಹಾಕಲಾಗುತ್ತಿತ್ತೆಂದು ಅವರು ಹೇಳುತ್ತಾರೆ.

ಎರಡನೇ ನಿರೂಪಣೆ ಪ್ರಕಾರ, ಈ ತಟ್ಟೆಗಳನ್ನು ಕೋತಿಗಳ ಊಟಕ್ಕಾಗಿ ಬಳಸುತ್ತಿದ್ದರಂತೆ. ಕೋತಿಗಳ ಊಟಕ್ಕಾಗಿ ಮೀಸಲಾಗಿದ್ದ ಕೃಷಿ ಭೂಮಿಗಳನ್ನು ಕೃಷಿ ಮಾಡುವ ಯಾರೇ ಆದರೂ ದಿನಂಪ್ರತಿ ಮಧ್ಯಾಹ್ನ ಕೋತಿಗಳಿಗೆ ಈ ತಟ್ಟೆಗಳಲ್ಲಿ ಊಟ ಹಾಕುತ್ತಿದ್ದರಂತೆ. ಈ ಕೋತಿಗಳಿಗೆ ನೀರನ್ನು ಕುಡಿಯಲು ತಟ್ಟೆಯ ಮುಂದಿನ ಭಾಗದಲ್ಲಿ ಸಣ್ಣ ಕಾಲುವೆಯನ್ನು ತೋಡಿಸಿದ್ದರು. ಕೋತಿಗಳು ಊಟವಾದ ನಂತರ ಆ ಕಾಲುವೆಯ ನೀರನ್ನು ಕುಡಿಯುತ್ತಿದ್ದವಂತೆ.

ಮೂರನೇ ನಿರೂಪಣೆ ಪ್ರಕಾರ, 'ಇವುಗಳು ಸತ್ತವರಿಗೆ ಎಡೆ ಇಡಲಾಗುತ್ತಿದ್ದ ತಟ್ಟೆಗಳು'. ಯುದ್ಧಗಳಲ್ಲಿ ಸತ್ತವರಿಗಾಗಿ ಮತ್ತು ಹಾಗೆ ಸತ್ತವರ ಹೆಂಡತಿಯರು ಮಹಾಸತಿಯರಾದಾಗ ಅವರಿಗೆಲ್ಲ ಸಾಮೂಹಿಕವಾಗಿ ಅವರ ಮನೆಯವರು ಮತ್ತು ಬಂಧುಬಾಂಧವರು ಸೇರಿ ಅವರಿಗೆಲ್ಲಾ ಸಾಮೂಹಿಕವಾಗಿ ಎಡೆ ಇಡುತ್ತಿದ್ದರಂತೆ. ಈ ಆಚರಣೆಯನ್ನು ದಸರಾ, ದೀಪಾವಳಿ, ಯುಗಾದಿ ದೊಡ್ಡ ಹಬ್ಬಗಳಂದು ಮಾಡುತ್ತಿದ್ದರು. ಸತ್ತವರ ಆತ್ಮಗಳು ತಟ್ಟೆಯ ಮೇಲಿರಿಸಿದ ಊಟವನ್ನು ಮಾಡುತ್ತಿದ್ದವು. ಹೀಗಾಗಿ ಈ ತಟ್ಟೆಗಳು ಸತ್ತವರಿಗಾಗಿ ಇರುವ ಊಟದ ತಟ್ಟೆಗಳು ಎಂಬ ನಿರೂಪಣೆಯನ್ನು ನೀಡುತ್ತಾರೆ.

### ೩೭. ಕಡ್ಡಿರಾಂಪುರ

ಹೊಸಪೇಟೆಯಿಂದ ಹಂಪಿಗೆ ಹೋಗುವ ಮಾರ್ಗದಲ್ಲಿ ಕಡ್ಡಿರಾಂಪುರ ಗ್ರಾಮ ಕಂಡುಬರುತ್ತದೆ. ಈ ಗ್ರಾಮಕ್ಕಿರುವ ಐತಿಹ್ಯವೇನೆಂದರೆ,

೧. ವಿಜಯನಗರ ಕಾಲದಲ್ಲಿ ಈ ಗ್ರಾಮವನ್ನು 'ರಾಮಪುರ' ಎಂದು ಕರೆಯುತ್ತಿದ್ದರು. ಖಡ್ಗಗಳನ್ನು ತಯಾರಿಸುತ್ತಿದ್ದರಂತೆ. ಖಡ್ಗಗಳನ್ನು ತಯಾರಿಸುತ್ತಿದ್ದುದರಿಂದ ರಾಮಪುರವನ್ನು 'ಖಡ್ಗರಾಮಪುರ' ಎಂದು ಕರೆಯಲಾಯಿತು. ನಂತರ ಇದು 'ಕಡ್ಡಿರಾಮಪುರ' ಎಂಬ ಹೆಸರನ್ನು ಪಡೆದುಕೊಂಡಿತು.

೨. ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋದಾಗ ರಾಮನು ಸೀತೆಯನ್ನು ಹುಡುಕುತ್ತಾ ಈ ಸ್ಥಳಕ್ಕೆ ಬಂದಾಗ ಚಿಂತೆಯಿಂದ ಸೊರಗಿ ಕಡ್ಡಿಯಂತಾಗಿದ್ದರಿಂದ ಈ ಊರಿಗೆ ಕಡ್ಡಿರಾಮನಪುರ> ಕಡ್ಡಿರಾಂಪುರ ಎಂಬ ಹೆಸರು ಬಂದಿತೆಂದು ನಿರೂಪಕರು ಮಾಹಿತಿಯನ್ನು ನೀಡುತ್ತಾರೆ. ಬಹುಶಃ ರಾಂಪುರ ಎಂಬ ಹೆಸರಿನ ಗ್ರಾಮಗಳು ಹಂಪಿ ಪರಿಸರದಲ್ಲಿ ಎರಡು ಇದ್ದ ಕಾರಣ ಗುರುತಿಗಾಗಿ ಈ ರೀತಿ ಕರೆಯುವ ರೂಢಿ ಮೊದಲಿನಿಂದಲೂ ಗ್ರಾಮನಾಮ ಅಧ್ಯಯನದಲ್ಲಿ ಗಮನಿಸಬಹುದಾಗಿದೆ.

### ೩೮. ಕಮಲಾಪುರ

ಕಮಲಾಪುರ ಗ್ರಾಮವು ಹೊಸಪೇಟೆ ತಾಲೂಕಿನ ಹಂಪೆ ಪರಿಸರದಲ್ಲಿರುವ ಒಂದು ಪಟ್ಟಣ. ಈ ಗ್ರಾಮಕ್ಕೆ ಸಂಬಂಧಿಸಿದ ಐತಿಹ್ಯವಿರುವುದನ್ನು ನಾವು ಗಮನಿಸಬಹುದು.

೧. ಹಿಂದೆ ಮಾಧವಭಟ್ಟರೆಂಬ ಬ್ರಾಹ್ಮಣರು ದಾರಿದ್ರ್ಯ ನಿರ್ವಹಣೆಗಾಗಿ ತಪಸ್ಸು ಮಾಡಲು ಈ ಸ್ಥಳವನ್ನು ಹುಡುಕಿಕೊಂಡು ಬಂದಾಗ ಪಂಪಾಸರೋವರಕ್ಕೆ ಪಶ್ಚಿಮ ಭಾಗದಲ್ಲಿ 'ಕಮಲಾದೇವಿ' ಎಂಬ ದುರ್ಗಿ ದೇವಸ್ಥಾನವನ್ನು ಕಂಡು ತಪಸ್ಸು ಮಾಡಿ ಸಿದ್ಧಿಯನ್ನು ಪಡೆದರಂತೆ. ಆ ಸ್ಥಳದಲ್ಲಿ 'ಕಮಲಾದೇವಿ' ಎಂಬ ದುರ್ಗಿ ದೇವಸ್ಥಾನವಿದ್ದುದರಿಂದ ಆ ಸ್ಥಳವನ್ನು 'ಕಮಲಾಪುರ' ಎಂದು ಕರೆಯಲಾಗಿದೆ ಎಂಬುದನ್ನು ಎಂ.ಎಂ. ಕಲಬುರ್ಗಿ ಅವರು ಸಂಪಾದಿಸಿದ ಕರ್ನಾಟಕ ಕೈಫಿಯತ್ತುಗಳು ಕೃತಿಯಲ್ಲಿ ಉಲ್ಲೇಖಗೊಂಡಿದೆ.

೨. ವಿಜಯನಗರ ಕಾಲಕ್ಕೆ ಕೆರೆಯೊಂದನ್ನು ಕಟ್ಟಿಸಲಾಯಿತು. ಕೆರೆಯಲ್ಲಿ ಕಮಲದ ಹೂಗಳು ಹೇರಳವಾಗಿ ಬಿಡುತ್ತಿದ್ದವಂತೆ. ಕೆರೆಯ ಹಿಂದೆ ಸ್ಥಾಪನೆಯಾದ ಊರಿಗೆ 'ಕಮಲಾಪುರ' ಎಂಬ ಹೆಸರು ಬಂತೆಂದು ಇಲ್ಲಿನ ಸ್ಥಳೀಯರು ವಿವರಿಸುತ್ತಾರೆ.

### ೩೯. ಅನಂತಶಯನ ಗುಡಿ

ಈ ಗ್ರಾಮವು ಹೊಸಪೇಟೆಗೆ ಹೋಗುವ ಮಾರ್ಗದಲ್ಲಿ ಕಂಡುಬರುತ್ತದೆ. "ಕೃಷ್ಣದೇವರಾಯನು ತನ್ನ ಮಗನಾದ ತಿರುಮಲರಾಯನ ಹೆಸರಿನಲ್ಲಿ ಸಾಲೆ ತಿರುಮಲಮಹಾರಾಯ ಪಟ್ಟಣ ಎಂಬ ಗ್ರಾಮವನ್ನು ನಿರ್ಮಿಸಿ, ಅಲ್ಲಿ ಅನಂತಪದ್ಮನಾಭದೇವರ ದೇವಾಲಯವನ್ನು ಕಟ್ಟಿಸಿದನಂತೆ. ಸಾಲೆ ತಿರುಮಲಮಹಾರಾಯ ಪಟ್ಟಣ ಎಂಬ ಹೆಸರು ಮರೆಯಾಗಿ ಅನಂತಶಯನ ದೇವಾಲಯವನ್ನು ಆಧರಿಸಿ ಅನಂತಶಯನಗುಡಿ" ಎಂಬ ಹೆಸರು ಚಾಲ್ತಿಯಲ್ಲಿ ಬಂತೆಂಬುದನ್ನು ನಿರೂಪಕರು ವಿವರಿಸುತ್ತಾರೆ.

### ೪೦. ೬೪ ಕಾಲಿನ ಮಂಟಪ

ಆನೆಗೊಂದಿಯ ಪೂರ್ವ ಭಾಗದಲ್ಲಿ ತುಂಗಭದ್ರಾ ನದಿಯು ಇದ್ದು, ಈ ನದಿಯ ಮಧ್ಯದಲ್ಲಿ ನಿರ್ಮಾಣಗೊಂಡಿರುವ ಮಂಟಪ ಇದಾಗಿದೆ. ಇದನ್ನು ಕೃಷ್ಣದೇವರಾಯನ ಸಮಾಧಿ ಸ್ಥಳ ಎಂತಲೂ ಇಲ್ಲಿನ ಸ್ಥಳೀಯರು ಹೇಳುತ್ತಾರೆ. ಇದರ ಬಗೆಗಿರುವ ಐತಿಹ್ಯವೇನೆಂದರೆ ೬೪ ಕಲ್ಲಿನ ಕಂಬಗಳನ್ನು

ಉಪಯೋಗಿಸಿ ಮಂಟವನ್ನು ಕಟ್ಟಲಾಗಿದೆ. '೬೪ ಕಂಬಗಳ ಪ್ರತೀಕ ಬಲಿಷ್ಟ ವಿಜಯನಗರ ಸಾಮ್ರಾಜ್ಯಕ್ಕೆ ರಾಜರಾಗುವವರು ೬೪ ವಿದ್ಯೆಗಳಲ್ಲಿ ಪಾಂಡಿತ್ಯವನ್ನು ಪಡೆದಿರಬೇಕೆಂಬುದು ಈ ಮಂಟಪದ ೬೪ ಕಂಬಗಳ ಪ್ರತೀಕ' ಎಂದು ಸ್ಥಳೀಯರು ವಿವರಿಸುತ್ತಾರೆ. ಶ್ರೀ ಕೃಷ್ಣದೇವರಾಯನು ೬೪ ವಿದ್ಯೆಗಳಲ್ಲಿ ಪರಾಂಗತನಾಗಿದ್ದನಂತೆ.

### ೪೧. ಮಹಾನವಮಿ ದಿಬ್ಬ

'ಮಹಾನವಮಿ ದಿಬ್ಬ' ಎಂದರೆ ಎತ್ತರವಾದ ಸಭಾ ಪೀಠವನ್ನು ಹೊಂದಿರುವ ಸ್ಥಳ. ಇದು ರಾಜಪ್ರಾಂಗಣ ಸ್ಥಳದಲ್ಲಿ ಕಂಡುಬರುತ್ತದೆ. ಕೃಷ್ಣದೇವರಾಯನು ಉದಯಗಿರಿಯ ದಿಗ್ವಿಜಯದ ಸ್ಮರಣಾರ್ಥವಾಗಿ ೧೫೧೩ರಲ್ಲಿ ಕಟ್ಟಿಸಿದನೆಂದು ತಿಳಿದುಬರುತ್ತದೆ. ವಿಜಯನಗರದ ಕಾಲಕ್ಕೆ ಮಹಾನವಮಿ ಹಬ್ಬವನ್ನು ಬಹಳ ವಿಜೃಂಭಣೆಯಿಂದ ೯ ದಿನಗಳ ಕಾಲ ಆಚರಿಸುತ್ತಿದ್ದರು. ಇದು ಅವರಿಗೆ ನಾಡಹಬ್ಬವಾಗಿತ್ತು. ವಿದೇಶಿ ಯಾತ್ರಿಕರು ಈ ಹಬ್ಬದ ವೈಭವವನ್ನು ಮುಕ್ತಕಂಠದಿಂದ ವರ್ಣಿಸಿದ್ದಾರೆ. ಈ ಹಬ್ಬದ ಉತ್ಸವದ ಆಚರಣೆಯ ಉದ್ದೇಶಕ್ಕಾಗಿ ಈ ಸಭಾ ಪೀಠವನ್ನು ನಿರ್ಮಿಸಲಾಗಿತ್ತು. ಇದು ಸುಮಾರು ೨೨ ಅಡಿ ಎತ್ತರವಾಗಿದ್ದು, ಈ ಸಭಾ ಪೀಠದ ಮೇಲೆ ಮಹಾನವಮಿಯ ದಿನ ಅರಸನು, ಸಾಮಂತ ಮಾಂಡಲೀಕರು, ವಿಶೇಷ ಆಹ್ವಾನಿತರು ಮತ್ತು ರಾಜಪರಿವಾರದೊಡನೆ ಕುಳಿತು ಎದುರುಗಡೆ ನಡೆಯುತ್ತಿದ್ದ ಕುಸ್ತಿ, ನಾಟ್ಯ, ಆನೆಗಳ ಕಾಳಗ, ಮುಂತಾದ ಕ್ರೀಡಾ ಉತ್ಸವಗಳನ್ನು ವೀಕ್ಷಿಸುತ್ತಿದ್ದನು. ಈ ಸಭಾ ಪೀಠವು ೯ ಅಂತಸ್ತುಗಳನ್ನು ಹೊಂದಿತ್ತು. ಅತ್ಯಂತ ಮೇಲಿನ ವೇದಿಕೆಯನ್ನು ಅರಸನು ಅಲಂಕರಿಸಿದ್ದರೆ, ೭ನೇ ಅಂತಸ್ತಿನಲ್ಲಿ ವಿದೇಶಿಯರಿಗೆ ಸ್ಥಾನಾವಕಾಶ ಮಾಡಿಕೊಡಲಾಗಿತ್ತೆಂದು ತಿಳಿದು ಬರುತ್ತದೆ. ಮಹಾನವಮಿದಿಬ್ಬದಲ್ಲಿ ನಡೆಯುತ್ತಿದ್ದ ಈ ವಿಜೃಂಭಣೆಯ ಹಬ್ಬವನ್ನು ಕುರಿತು ವಿದೇಶಿ ಯಾತ್ರಿಕನಾದ ಅಬ್ದುಲ್ ರಜಾಕ್‌ನು ಹೀಗೆ ಹೇಳುತ್ತಾನೆ.

"ಮಹಾನವಮಿ ಹಬ್ಬವು ವಿಜಯನಗರ ಅರಸರ ಪ್ರತಿಷ್ಠೆಯನ್ನು ಪ್ರದರ್ಶಿಸುವ ಹಬ್ಬವಾಗಿತ್ತು" ಎಂದು ತಿಳಿಸಿದ್ದಾನೆ.

ನ್ಯೂನಿಜ್ : "ದಂಡನಾಯಕರಿಂದ ಕಪ್ಪಕಾಣಿಕೆಗಳನ್ನು ಸ್ವೀಕರಿಸಲೆಂದೇ ಈ ಹಬ್ಬವನ್ನು ವಿಜಯನಗರ ಅರಸರು ಆಚರಿಸುತ್ತಿದ್ದರು" ಎಂದು ತಿಳಿಸಿದ್ದಾನೆ.

ಈ ಸಭಾ ಪೀಠವನ್ನು ಮಹಾನವಮಿದಿಬ್ಬ, ವಿಜಯಸೌಧ, ವಿಜಯಮಂಟಪ ಎಂಬ ಹೆಸರುಗಳಿಂದ ಕರೆಯಲಾಗುತ್ತದೆ.

### ೪೨. ದಣಾಯಕನ ನಿವಾಸ

ಹಜಾರರಾಮ ದೇವಾಲಯದ ಪಶ್ಚಿಮಕ್ಕಿರುವ ಬೃಹತ್ ಗೋಡೆಗಳ ಆವರಣದ ಹಿಂದೆ ವಿಜಯನಗರದ ಮುಖ್ಯ ಸೇನಾಪತಿಯ ಅಂದರೆ ದಣಾಯಕನ ನಿವಾಸವಿತ್ತು. ಆದರೆ ಇಂದು ಅಲ್ಲಿ ಹೇಳಿಕೊಳ್ಳುವಂಥ ಅವಶೇಷಗಳು ಉಳಿದಿಲ್ಲ. ಈ ನಿವಾಸದ ಪ್ರವೇಶದ್ವಾರದ ಬಲಕ್ಕೆ ಮುಸ್ಲಿಂ ಶೈಲಿಯ

ಎರಡಂತಸ್ತಿನ ಕಾವಲುಗೋಪುರ, ಒಳಗಡೆ ಮುಂಭಾಗದಲ್ಲಿ ಕಮಾನುಗಳಿರುವ ವಿಶಾಲ ಮಂಟಪ ಮತ್ತು ಅದರ ಪಕ್ಕಕ್ಕೆ ಕಾವಲುಗೋಪುರವಿದೆ.

### ೪೩. ಭೀಮನ ಹೆಬ್ಬಾಗಿಲು

ಕಮಲಾಪುರದಿಂದ ಕಂಪ್ಲಿಗೆ ಹೋಗುವ ರಸ್ತೆ ಬದಿಯಲ್ಲಿ ಬರುವ ಗಾಣಗಿತ್ತಿ ದೇವಾಲಯದ ಆಗ್ನೇಯ ದಿಕ್ಕಿಗೆ ಈ ಹೆಬ್ಬಾಗಿಲಿದೆ. ಈ ಬಾಗಿಲು ಸುಮಾರು ೨೦ ಅಡಿ ಎತ್ತರ ಹಾಗೂ ೧೫ ಅಡಿ ಅಗಲವಾಗಿದೆ. ಇದರ ಆಕಾರದ ಕಾರಣದಿಂದಾಗಿಯೇ ಇದಕ್ಕೆ ಭೀಮನ ಹೆಬ್ಬಾಗಿಲೆಂದು ಹೆಸರು ಬಂದಿರಬಹುದು.

ವನವಾಸದಲ್ಲಿದ್ದ ಪಾಂಡವರು ಈ ಪರಿಸರಕ್ಕೆ ಬಂದಾಗ ಪಾಂಡವರಿಗೆ ಕೀಚಕನು ಹೆಚ್ಚಿನ ಉಪದ್ರವ ನೀಡಿದನಂತೆ ಇದನ್ನು ಸಹಿಸದ ಭೀಮನು ಕೀಚಕನನ್ನು ಸಂಹಾರ ಮಾಡಿದನೆಂಬ ನಂಬಿಕೆ ಇದೆ. ಹೆಬ್ಬಾಗಿಲಿನ ಮುಂಭಾಗದ ಆವರಣದಲ್ಲಿ ಭೀಮನ ೮ ಅಡಿ ಎತ್ತರದ ಬಿಡಿ ಶಿಲ್ಪವಿದೆ. ಹತ್ತಿರದ ಗೋಡೆಯಲ್ಲಿ ಕೀಚಕನನ್ನು ಸಂಹಾರ ಮಾಡುವ ದೃಶ್ಯವನ್ನು ಕೆತ್ತಲಾಗಿದೆ. ಮಹಾಭಾರತಕ್ಕೆ ಸಂಬಂಧಿಸಿದ ಚಿತ್ರಗಳು ಕಂಡುಬರುವುದು ಈ ಹೆಬ್ಬಾಗಿಲಿನ ವಿಶೇಷತೆ.

### ೪೪. ಗೆಜ್ಜಲು ಮಂಟಪ (ಪರಾಂಕುಶಮಂಟಪ)

ಈ ಮಂಟಪು ತಳವಾರಘಟ್ಟ ರಸ್ತೆಯ ವಿಠ್ಠಲದೇವರ ಗುಡಿಗೆ ಹೋಗುವ ಮಾರ್ಗದ ಪ್ರಾರಂಭದಲ್ಲಿ ಕಂಡುಬರುತ್ತದೆ. ಇದನ್ನು 'ಗೆಜ್ಜಲು ಮಂಟಪ' (ಗೆಜ್ಜಲ ಮಂಟಪ) ಅಥವಾ 'ಪರಾಂಕುಶಮಂಟಪ'ವೆಂದು ಕರೆಯುತ್ತಾರೆ. ವಿಠ್ಠಲ ದೇವರ ರಥೋತ್ಸವ ಮತ್ತು ಇತರ ಉತ್ಸವಗಳೆಂದು ವಿಠ್ಠಲ ದೇವರ ಉತ್ಸವ ಮೂರ್ತಿಯನ್ನು ತೇರುಬೀದಿಯ ತುದಿಯಲ್ಲಿರುವ ಪರಾಂಕುಶಮಂಟಪದವರೆಗೆ ಒಯ್ಯುತ್ತಿದ್ದರು ಎಂಬ ಮಾಹಿತಿ ಲಿಖಿತ ಮೂಲಗಳಿಂದ ತಿಳಿದುಬರುತ್ತದೆ. ಆದರೆ ಮೌಖಿಕವಾಗಿ ಈ ಮಂಟಪವನ್ನು 'ಗೆಜ್ಜಲುಮಂಟಪ' ಎಂದು ಕರೆಯಲಾಗಿದೆ. 'ಗೆಜ್ಜಲು' ಎಂಬ ಪದವು ತೆಲುಗು ಪದವಾಗಿದ್ದು 'ಗೆಜ್ಜೆ' ಎಂಬ ಅರ್ಥ ಬರುತ್ತದೆ. ಕನ್ನಡದಲ್ಲಿ 'ಕಿರುಗಂಟೆ' ಎಂಬ ಅರ್ಥ ಬರುತ್ತದೆ. ಅಂದರೆ ಅಂದಿನ ವಿಜಯನಗರ ಸಾಮ್ರಾಜ್ಯದಲ್ಲಿ ವೇಶ್ಯಾವೃತ್ತಿ ಎನ್ನುವುದು ಯಾವುದೇ ಅಡೆತಡೆಗಳಿಲ್ಲದೆ ರಾಜರುಗಳ ಪ್ರೋತ್ಸಾಹದಿಂದ ನಡೆಯುತ್ತಿತ್ತೆಂದು ತಿಳಿದುಬರುತ್ತದೆ. ಇಂತಹ ವೇಶ್ಯಾವೃತ್ತಿಗೆ ಬರುವ ಮೊದಲು 'ಗೆಜ್ಜೆಪೂಜೆ' (ವೇಶ್ಯಾವೃತ್ತಿಯನ್ನು ಪ್ರಾರಂಭಿಸುವಾಗ ಮಾಡುವ ಸಮಾರಂಭ) ಎಂಬ ಧಾರ್ಮಿಕ ಆಚರಣೆಯನ್ನು ಮಾಡಿ ಅವರನ್ನು ವೇಶ್ಯಾವೃತ್ತಿಗೆ ಕಳುಹಿಸುವ ಸಂಪ್ರದಾಯವನ್ನು ಈ ಮಂಟಪದಲ್ಲಿ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಆದ್ದರಿಂದ ಇದನ್ನು 'ಗೆಜ್ಜಲು ಮಂಟಪ' ಎಂದು ಕರೆಯುತ್ತಾರೆಂದು ನಿರೂಪಕರು ತಿಳಿಸುತ್ತಾರೆ.

### ೪೫. ಮುಹಮ್ಮದೀಯರ ಗೋರಿಗಳು

ಕಡ್ಡಿರಾಂಪುರದ ಹೊರವಲಯದಲ್ಲಿರುವ ಈ ಕಟ್ಟಡಗಳ ಬಗ್ಗೆ ಖಚಿತ ದಾಖಲೆಗಳಾವವೂ ಇಲ್ಲ. ಇಲ್ಲಿ ಸುತ್ತಲೂ ನೂರಾರು ಮುಸ್ಲಿಂ ಸಮಾಧಿ ಕಲ್ಲುಗಳು ಹರಡಿರುವುದರಿಂದ ಇದು ವಿಜಯನಗರ

ಕಾಲದ ಮುಸ್ಲಿಂ ಸ್ಮಶಾನವೆಂಬುದರಲ್ಲಿ ಸಂಶಯವಿಲ್ಲ. ಇಲ್ಲಿರುವ ಎರಡು ಕಟ್ಟಡಗಳು ಯಾರೋ ಅನಾಮಿಕ ದೊಡ್ಡ ವ್ಯಕ್ತಿಗಳ ಸ್ಮಾರಕಗಳಾಗಿವೆ. ದೊಡ್ಡ ಕಟ್ಟಡ ತಳದಲ್ಲಿ ಚೌಕಾಕಾರವಾಗಿದ್ದು ಮೇಲೆ ವರ್ತುಲಾಕಾರವಾಗಿ ಮುಗಿದಿದೆ. ಬಹುಶಃ ಮೊದಲು ಈ ಕಟ್ಟಡದ ಮೇಲೆ ಗುಮ್ಮಟ ಇದ್ದಿರಬೇಕು. ಈಗ ಛಾವಣಿ ಇಲ್ಲದೆ ತೆರೆದುನಿಂತಿದೆ. ಗೋಡೆಗಳಲ್ಲಿ ಅಚ್ಚ ಮುಸ್ಲಿಂ ಶೈಲಿಯ ಕಮಾನುಗಳಿವೆ. ಮಧ್ಯದಲ್ಲಿ ಮೂರು ಸಮಾಧಿಗಳಿವೆ. ಇವು ಕೊಠಡಿಯಂತಿದ್ದು ಮೇಲೆ ಗುಮ್ಮಟವಿದೆ. ಆದರೆ ಈಗ ಈ ಸಮಾಧಿಗಳ ಕುರುಹು ಏನೂ ಉಳಿದಿಲ್ಲ.

### ೪೬. ರಾಣಿಯರ ಸ್ನಾನಗೃಹ

ಕಮಲಾಪುರದಿಂದ ಹಂಪಿಗೆ ಹೋಗುವ ಮಾರ್ಗದ ಬಲಭಾಗದಲ್ಲಿ ರಾಣಿಯರ ಸ್ನಾನಗೃಹ ಕಂಡುಬರುತ್ತದೆ. ಈ ಸ್ನಾನಗೃಹವನ್ನು ಇತ್ತೀಚಿನ ಸಂಶೋಧನೆಯ ಪ್ರಕಾರ ಅಚ್ಯುತರಾಯನ (೧೫೩೦-೧೫೪೨) ಕಾಲದಲ್ಲಿ ನಿರ್ಮಾಣ ಮಾಡಲಾಯಿತು ಎಂಬ ಅಂಶ ತಿಳಿದುಬರುತ್ತದೆ.

ವಿಜಯನಗರ ರಾಜ್ಯದ ರಾಣಿಯರು ಮತ್ತು ರಾಜ್ಯದ ಉನ್ನತಾಧಿಕಾರಿಗಳ ಮನೆಯ ಮಹಿಳೆಯರು ಈ ಸ್ನಾನಗೃಹವನ್ನು ಬಳಸುತ್ತಿದ್ದರಂತೆ. ಆಗಾಗ ರಾಜರೂ ಸಹಿತ ತಮ್ಮ ಮಹಿಳಾ ಸಂಗಾತಿಗಳ ಜೊತೆ ಜಲಕ್ರೀಡೆಯಾಡುತ್ತಿದ್ದರಂತೆ. ರಾಣಿಯರು ಜಲಕ್ರೀಡೆಯಾಡುವ ಸಂದರ್ಭದಲ್ಲಿ ಅಂದಿನ ಅರಸರು ರಾಣಿಯರ ಕಾವಲಿಗಾಗಿ ನಪುಂಸಕರನ್ನು ನೇಮಿಸಿದ್ದರಂತೆ. ರಾಣಿಯರು ಸ್ನಾನವಾದ ನಂತರ ಸ್ನಾನಗೃಹದ ಪೂರ್ವಕ್ಕಿರುವ ಚಂದ್ರಶೇಖರ ದೇವಸ್ಥಾನಕ್ಕೆ ಪೂಜೆ ಸಲ್ಲಿಸಿ ಬರುತ್ತಿದ್ದರಂತೆ. ರಾಣಿಯರ ಸ್ನಾನಗೃಹಕ್ಕೆ ಕಾಲುವೆಯಿಂದ ನೀರಿನ ಪೂರೈಕೆಯನ್ನು ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಸ್ನಾನವಾದ ನಂತರ ಸ್ನಾನದ ನೀರನ್ನು ಹೊರಹೋಗುವಂತೆ ಮಾಡಲು ಒಂದು ರಂಧ್ರವನ್ನು ಸಹ ಮಾಡಿದ್ದರು. ಈ ಸ್ನಾನಗೃಹವು ಹಿಂದು-ಮುಸ್ಲಿಂ ವಾಸ್ತುಶೈಲಿಯನ್ನು ಹೊಂದಿದ್ದು, ಯಾವುದೇ ದಕ್ಕೆಗೆ ಗುರಿಯಾಗದೇ ಈಗಲೂ ಉಳಿದುಕೊಂಡು ಬಂದಿರುವುದು ಕಂಡುಬರುತ್ತದೆ.

### ೪೭. ಸೂಳೆ ಬಾವಿ

ಈ 'ಸೂಳೆ ಬಾವಿ'ಯು ಮಲಪನಗುಡಿ ಗ್ರಾಮದ ಬಳಿ ಕಂಡುಬರುತ್ತದೆ. ಸಂಗಮ ವಂಶದ ದೊರೆ ಒಂದನೇ ದೇವರಾಯನ ಕಾಲದಲ್ಲಿ ಈ ಬಾವಿಯು ನಿರ್ಮಾಣವಾಗಿದೆ ಎಂದು ಆ ಗ್ರಾಮದ ಮಲ್ಲಿಕಾರ್ಜುನ ದೇವಸ್ಥಾನದ ಶಿಲಾಶಾಸನದಿಂದ ಮಾಹಿತಿಯು ಸಿಗುತ್ತದೆ. ಇದನ್ನು ಸೂಳೆಯರು ನಿರ್ಮಿಸಿದ್ದರೆಂದು ತಿಳಿದುಬರುತ್ತದೆ. ಸಮಾಜ ಗೌರವ ನೀಡದಿದ್ದರೂ, ಗೌರವಕ್ಕೆ ಯೋಗ್ಯವಾದ ಕೆಲಸವನ್ನು ವಿಜಯನಗರ ಕಾಲದ ಅಂದಿನ ಸೂಳೆಯರು. ಈ ಬಾವಿಯನ್ನು ನಿರ್ಮಿಸುವುದರ ಮೂಲಕ ತೋರಿಸಿಕೊಟ್ಟಿದ್ದಾರೆ. ಅವರು ಮಾಡುವ ವೃತ್ತಿಯಿಂದ ಎಲ್ಲರೂ ಕೂಡಿಕೊಂಡು ದುಡ್ಡು ಹಾಕಿ ಈ ಬಾವಿಯನ್ನು ತೋಡಿಸಿದ್ದರೆಂದು ಇಲ್ಲಿನ ಸ್ಥಳೀಯರು ವಿವರಿಸುತ್ತಾರೆ.

ಈ ಬಾವಿಯು ಸುಂದರ ಕೆತ್ತನೆಗಳಿಂದ ಕೂಡಿದ್ದು ಮುಸ್ಲಿಂ ಶೈಲಿಯ ಕಮಾನುಗಳನ್ನು, ಉಬ್ಬು ಕೆತ್ತನೆಯಲ್ಲಿ ಆಂಜನೇಯ ಮುಂತಾದ ದೇವರ ಮೂರ್ತಿಗಳನ್ನು ಕಾಣಬಹುದಾಗಿದೆ. ಬಾವಿಯ ಕೆಳಗೆ ಇಳಿಯಲು ಮೆಟ್ಟಿಲುಗಳನ್ನು ಮಾಡಲಾಗಿದೆ. ಈ ಬಾವಿಯು ಅಂದಿನ ಪ್ರಯಾಣಿಕರಿಗೆ, ಪ್ರವಾಸಿಗರಿಗೆ, ಸ್ಥಳೀಯರಿಗೆ ಊಟ ಮಾಡಿ, ನೀರು ಕುಡಿದು ವಿಶ್ರಾಂತಿ ಪಡೆಯಲು ಅನುಕೂಲಕರವಾಗಿತ್ತೆಂದು ತಿಳಿದುಬರುತ್ತದೆ.

### ೪.೨.೩. ಘಟನಾ ಪ್ರಧಾನ ಐತಿಹ್ಯಗಳು

ಇಲ್ಲಿ ಘಟನೆಯೇ ಮುಖ್ಯವಾಗಿರುವುದು ಕಂಡುಬರುತ್ತದೆ. ಸ್ಥಳ ಮತ್ತು ವ್ಯಕ್ತಿಗಳು ಎರಡನೇ ಸ್ಥಾನದಲ್ಲಿ ಬರುತ್ತಾರೆ. ಎಷ್ಟೋ ಬಾರಿ ವ್ಯಕ್ತಿ ಇರುವುದರ ಬದಲು ಜನರ ಗುಂಪು ಅಥವಾ ಜನಸಮೂಹ ಇರುವುದು ಇದೆ.

ಹಂಪಿ ಪರಿಸರದ ಕುರಿತು ಈ ಕೆಳಗಿನ ಘಟನಾಪ್ರಧಾನ ಐತಿಹ್ಯಗಳು ಲಭಿಸುತ್ತವೆ.

೧. ಅಕ್ಕ-ತಂಗಿಯರ ಗುಂಡು

ಕಾಮಲಾಪುರದಿಂದ ಹಂಪಿಗೆ ಹೋಗುವ ದಾರಿಯಲ್ಲಿ ಎಡಬದಿಗೆ ಒಂದಕ್ಕೊಂದು ತಾಗಿನಿಂತ ಎರಡು ಬೃಹದಾಕಾರವಾದ ಗುಂಡುಗಳಿಗೆ ಅಕ್ಕ-ತಂಗಿಯರ ಗುಂಡು ಎಂಬ ಹೆಸರಿದೆ. ಈ ಗುಂಡುಗಳ ಬಗೆಗೆ ಹಲವಾರು ಕಥೆಗಳು ಕಂಡುಬರುತ್ತವೆ. ಭೋಜರಾಜ ಎಂಬುವನಿಗೆ ಇಬ್ಬರು ಹೆಣ್ಣು ಮಕ್ಕಳಿದ್ದರಂತೆ. ಆ ರಾಜನು ತನ್ನ ಮಕ್ಕಳಿಗಿಂತ ಸಕಲ ವಿದ್ಯಾಪಾರಂಗತರು ಬೇರೆ ಯಾರೂ ಇಲ್ಲವೆನ್ನುವಷ್ಟರಮಟ್ಟಿಗೆ ಅವರಿಗೆ ವಿದ್ಯೆಯನ್ನು ನೀಡಿದ್ದನು. ಒಮ್ಮೆ ಅವರಿಬ್ಬರು ತಂದೆಯಲ್ಲಿಗೆ ಬಂದು ಅಪ್ಪಾಜಿ ನಿನ್ನಿಷ್ಟದಂತೆ ಸಕಲ ವಿದ್ಯಾಪಾರಂಗತರಾದೆವು. ಆದರೆ ದೇಶ ಪರ್ಯಟನೆ ಮಾಡಿ, ನಮಗಿಂತಲೂ ಹೆಚ್ಚಿನವರು ಯಾರಾದರೂ ಇರಬಹುದೇ ಎಂದು ನೋಡಬೇಕಾಗಿದೆ. ಆದ್ದರಿಂದ ನಮ್ಮನ್ನು ದೇಶ ಪರ್ಯಟನೆಗೆ ಕಳುಹಿಸಿಕೊಡಿ ಎಂದು ಕೇಳಿದರು. ಆಗ ಭೋಜರಾಜನು ಮಕ್ಕಳ ಇಷ್ಟದಂತೆ ಅವರಿಗೆ ಪ್ರವಾಸಕ್ಕೆ ಬೇಕಾದ ಸಕಲ ಸಿದ್ಧತೆಗಳನ್ನು ಮಾಡಿ ಅವರನ್ನು ಕಳುಹಿಸಿಕೊಟ್ಟನು. ಆ ರಾಜಕುಮಾರಿಯರು ಹಲವಾರು ದೇಶಗಳನ್ನು ಸುತ್ತಿ ಹಂಪಿಗೆ ಬಂದರು. ಹಂಪಿಯನ್ನು ಕಾಲ್ನಡಿಗೆಯಲ್ಲಿಯೇ ಸುತ್ತಿದ ಅವರಿಗೆ ಬೇಸರ ಬಂದು 'ಈ ಹಾಳು ಹಂಪಿಗೆ ಬರುವುದರ ಬದಲು ಯಾವುದಾದರೂ ಕೊಂಪೆಗೆ ಹೋಗಬಹುದಿತ್ತು' ಎಂದರಂತೆ. ಈ ಮಾತು ಅಲ್ಲೇ ತಪಸ್ಸು ಮಾಡುತ್ತಿದ್ದ ಒಬ್ಬ ಋಷಿಗೆ ಇವರ ಮಾತು ಕೇಳಿಸಿತು. ಅವನು ಸಿಟ್ಟಾಗಿ, 'ಇಂತಹ ಪವಿತ್ರವಾದ ನೆಲಕ್ಕೆ ಹೀಗೆ ಹೇಳುವ ನೀವುಗಳು ಕಲ್ಲಾಗಿ' ಎಂದು ಶಾಪ ನೀಡಿದನು. ಅಂದಿನಿಂದ ಅವರಿಬ್ಬರು ಕಲ್ಲಾದರೂ ಮತ್ತು ಆ ಕಲ್ಲುಗಳಿಗೆ ಅಕ್ಕ-ತಂಗಿಯರ ಕಲ್ಲು ಎಂಬ ಹೆಸರು ಬಂದಿತು.

ಇನ್ನೊಂದು ಐತಿಹ್ಯದ ಪ್ರಕಾರ - ಹಿಂದೆ ಹಂಪಿಯಲ್ಲಿ ಒಬ್ಬ ಗೌಡ ಇದ್ದನಂತೆ. ಆ ಗೌಡನ ಮಗ ಒಂದೇ ಮನೆಯಿಂದ ಅಕ್ಕ-ತಂಗಿಯರಿಬ್ಬರನ್ನು ಮದುವೆಯಾದನಂತೆ. ಅವನು ಮದುವೆಯಾದ ಕೆಲವು ದಿನಗಳಿಗೆ ಹಂಪಿಗೆ ಬರಗಾಲ ಬಂತು. ಬರಗಾಲದ ಕಷ್ಟಗಳನ್ನು ಅಕ್ಕ ಸಹಿಸುತ್ತಿದ್ದಳು. ಆದರೆ

ತಂಗಿಗೆ ಸಹಿಸಲು ಕಷ್ಟವಾಗುತ್ತಿತ್ತು. ಇದಕ್ಕಾಗಿ ಆಕೆ ತನ್ನ ತವರು ಮನೆಗೆ ಹಿಂದಿರುಗಲು ಯೋಚಿಸಿದಳಂತೆ. ಇದನ್ನು ತಿಳಿದ ಅಕ್ಕ 'ತಂಗಿ ನನ್ನನ್ನು ಬಿಟ್ಟು ತವರಿಗೆ ಹೋಗಬೇಡ, ನಿನ್ನ ಭಾರವನ್ನೆಲ್ಲ ನನ್ನ ಮೇಲೆ ಹಾಕು - ಸತ್ತರೆ ಇಬ್ಬರೂ ಇಲ್ಲೇ ಸಾಯೋಣ' ಎಂದು ಹೇಳಿ ತಂಗಿಯನ್ನು ತನ್ನ ಹೆಗಲ ಮೇಲೆ ಒರಗಿಸಿಕೊಂಡಳಂತೆ. ಅವರು ಹಾಗೇ ಕಲ್ಲಾದರು. ಈಗಲೂ ಅಕ್ಕನ ತೋಳಿನ ಮೇಲೆ ತಂಗಿ ಒರಗಿರುವುದನ್ನು ಕಾಣಬಹುದು.

೨. ಏಡಿ ಗುಡ್ಡ

ಹಂಪಿಯ ತುಲಾಭಾರದ ಬಲಬದಿಗೆ ಕಂಡುಬರುವ ಒಂದು ಸ್ಥಳಕ್ಕೆ 'ಏಡಿ ಗುಡ್ಡ' ಎಂದು ಹೆಸರು. ಕೋಟೆಗೋಡೆಗೆ ಅಂಟಿಕೊಂಡಂತೆ ಏಕಶಿಲಾ ಹಾಸಿಗೆಯ ಮೇಲೆ ಕಲ್ಲಿನ ಒಂದು ಸಣ್ಣ ಪೊಟರೆ ಇದ್ದು ಇಲ್ಲಿ ನೀರು ಸದಾ ಜಿನಗುತ್ತಿರುತ್ತದೆ. ಈ ಸ್ಥಳದಲ್ಲಿ ಸುಮಾರು ಎಂಟು ಅಡಿ ಉದ್ದದ ಸರ್ಪದ ಕೆತ್ತನೆ ಇದೆ. ಅದರ ಪಕ್ಕದಲ್ಲಿ ಮತ್ತೊಂದು ಸಣ್ಣ ಸರ್ಪ ಇದೆ. ಈ ಸಣ್ಣ ಸರ್ಪವು ಪರಸ್ಪರ ಎದುರು-ಬದುರಾಗಿರುವ ಬರಗಾಲಿನ ಎರಡು ಹೆಜ್ಜೆ ಗುರುತುಗಳನ್ನು ಸುತ್ತ ಸುತ್ತಿಕೊಂಡಿದೆ. ಇದರ ಬಗೆಗಿನ ಕಥೆಯೊಂದು ಹೀಗಿದೆ.

ಹಿಂದೆ, ಒಮ್ಮೆ ಅಗ್ನಿ ಪ್ರಳಯದಿಂದ ಭೂ ಮಂಡಲವೇ ಸುಟ್ಟು ಭಸ್ಮವಾಗಿತ್ತು. ಆ ಕಾಲದಲ್ಲಿ ಅಣ್ಣ ತಂಗಿಯರಿಬ್ಬರು ಇಲ್ಲಿನ ಏಡಿಗುಡ್ಡದೊಳಗೆ ಸೇರಿಕೊಂಡು ಜೀವ ಉಳಿಸಿಕೊಂಡರು. ಇಂತಹ ವೇಳೆಯಲ್ಲಿ ಶಿವ-ಪಾರ್ವತಿಯರು ಭೂಲೋಕವನ್ನು ಸುತ್ತಲು ಬಂದರು. 'ನಮ್ಮನ್ನು ಪೂಜಿಸುವವರು ಹಾಗೂ ಆರಾಧಿಸುವವರು ಯಾರೂ ಇಲ್ಲವಲ್ಲ ಮುಂದೆ ಮಾನವ ಸಂತತಿಯ ಸೃಷ್ಟಿ ಹೇಗೆ?' ಎಂದು ಅವರಿಗೆ ಚಿಂತೆಯಾಯಿತು.

ಹೀಗೆ ಆಕಾಶ ಮಾರ್ಗವಾಗಿ ಅವರು ಹೋಗುತ್ತಿರುವಾಗ ಕಲ್ಲಿನ ಪೊಟರೆಯಿಂದ ಸೂಜಿ ಗಾತ್ರದ ಹೊಗೆ ಕಂಡಿತು. ತಕ್ಷಣ ಪಾರ್ವತಿ ಶಿವನಿಗೆ ಅದನ್ನು ತೋರಿಸುತ್ತಾಳೆ. ಶಿವ ಆಲಿಕಲ್ಲಿನ ಮಳೆ ಬರುವಂತೆ ಮಾಡುತ್ತಾನೆ. ಮಳೆಯಿಂದಾಗಿ ನೆಲ ತಂಪಾಗುತ್ತದೆ. ಬೆಂಕಿ ಆರಿ ಹೋಗುತ್ತದೆ. ಶಿವನು ಅಡಗಿ ಕುಳಿತ ಅಣ್ಣ-ತಂಗಿಯರನ್ನು ಕಲ್ಲಿನ ಪೊಟರೆಯಿಂದ ಹೊರ ಬರುವಂತೆ ಹೇಳುತ್ತಾನೆ. ಹೆದರುತ್ತ ಹೊರಬಂದ ಅಣ್ಣ-ತಂಗಿಯರನ್ನು ಕುರಿತು ನೀವುಗಳು ಯಾರು? ಎಂದು ಕೇಳುತ್ತಾನೆ. ಆಗ 'ನಾವು ಅಣ್ಣ, ತಂಗಿ ಇಲ್ಲಿ ರಕ್ಷಣೆ ಪಡೆದು ಇದ್ದೇವೆ' ಎಂದರಂತೆ. ಶಿವ-ಪಾರ್ವತಿಯರು 'ನೋಡಿ ಪ್ರಪಂಚವೇ ಭಸ್ಮವಾಗಿದೆ. ಭೂಮಿಯ ಮೇಲೆ ನಿಮ್ಮನ್ನು ಬಿಟ್ಟರೆ ಒಂದು ಜೀವಾತ್ಮವೂ ಇಲ್ಲ. ಆದ್ದರಿಂದ ನಿಮ್ಮಿಂದಲೇ ಭೂಮಿಯ ಮೇಲೆ ಜೀವಿಗಳ ಸೃಷ್ಟಿಯಾಗಬೇಕು' ಎಂದರಂತೆ. ಅದಕ್ಕೆ ಆ ಅಣ್ಣ-ತಂಗಿ 'ಇದು ಸಾಧ್ಯವಿಲ್ಲ - ಇದಕ್ಕೆ ನಾವು ಒಪ್ಪುವುದಿಲ್ಲ' ಎನ್ನುತ್ತಾರೆ. ಆಗ ಶಿವ-ಪಾರ್ವತಿ "ಈ ಇಬ್ಬರಿಂದಲ್ಲದೇ ಈ ಭೂಮಿಯ ಮೇಲೆ ಮಾನವ ಪ್ರಾಣಿ ಸಂತತಿ ಹುಟ್ಟುವುದು, ಇಲ್ಲದಿದ್ದರೆ ಬೇರೆ ಯಾರಿಂದಲೂ ಇದು ಸಾಧ್ಯವಿಲ್ಲ' ಎಂದು ಅವರ ಬುದ್ಧಿ ಮರೆವು ಮಾಡಿದರು. ಅನಂತರ ಇಬ್ಬರನ್ನೂ ಪರಸ್ಪರ ಎದುರು-ಬದರು 'ನಿಲ್ಲಿಸಿ ನೀವುಗಳು

ಏನಾಗಬೇಕು?' ಎಂದು ಕೇಳಿದರು. ಆಗ ಅಣ್ಣ-ತಂಗಿ ಇಬ್ಬರು ನಾವು ಗಂಡ-ಹೆಂಡಿರಾಗಬೇಕು ಎಂದು ಹೇಳಿದರು. ತಕ್ಷಣ ಶಿವನು ತನ್ನ ಕೊರಳ ಸರ್ಪವನ್ನು ಅವರಿಗೆ ರಕ್ಷಣೆಯಾಗಿಟ್ಟು, ಭೂಮಿಯ ಮೇಲೆ ಮಾನವ ಸಂತತಿಯ ಬೆಳವಣಿಗೆಗೆ ಅನುವು ಮಾಡಿದನಂತೆ ಈ ಐತಿಹ್ಯವು ಹಂಪಿ ಪರಿಸರದಲ್ಲಿ ತುಂಬ ಜನಪ್ರಿಯವಾಗಿದೆ.

### ೩. ಗುಲಗಂಜಿ ಮಾಧವರಾಯ

ಹಂಪಿಯ ವಿರೂಪಾಕ್ಷ ದೇವಾಲಯದ ಪಕ್ಕದಲ್ಲಿ ಒಂದು ಸಣ್ಣ ಗುಡಿ ಇದೆ. ಅದನ್ನು 'ಗುಲಗಂಜಿ ಮಾಧವರಾಯರ ಗುಡಿ' ಎಂದು ಕರೆಯುತ್ತಾರೆ. ಈ ಗುಡಿಗೆ ಆ ಹೆಸರು ಬರಲು ವಿಶೇಷ ಕಾರಣಗಳಿವೆ. ಹಂಪಿಯನ್ನು 'ದಕ್ಷಿಣ ಕಾಶಿ' ಎಂದು ಕರೆಯುತ್ತಾರೆ. ಉತ್ತರ ಕಾಶಿಗಿಂತ ಇದನ್ನು ಮಿಗಿಲಾಗಿರಿಸಬೇಕೆಂದು ಇಲ್ಲಿನ ಜನರು ಹಂಪಿಯಲ್ಲಿ ಬೇಕಾದಷ್ಟು ಗುಡಿ-ಗುಂಡಾರಗಳನ್ನು ಕಟ್ಟಿಸಿದರಂತೆ, ದಾನ-ಧರ್ಮ ಮಾಡಿದರಂತೆ. ಕೊನೆಗೆ ಒಂದುದಿನ ಕಾಶಿ ಹೆಚ್ಚೋ, ಹಂಪಿ ಹೆಚ್ಚೋ ಎಂದು ತೂಗಿ ನೋಡಲು ನಿಶ್ಚಯಿಸಿ, ಎರಡೂ ಪುಣ್ಯಕ್ಷೇತ್ರಗಳನ್ನು ತಕ್ಕಡಿಯಲ್ಲಿ ಹಾಕಿ ತೂಗಿದರಂತೆ. ಆಗ ಕಾಶಿಯ ಭಾರವೇ ಒಂದು ಗುಲಗಂಜಿಯಷ್ಟು ಹೆಚ್ಚಾಯಿತು. ಇದರಿಂದ ಚಿಂತಿತರಾದ ಜನರು ವಿರೂಪಾಕ್ಷಗುಡಿಯ ಹಿಂಬದಿಯಲ್ಲಿ ಒಂದು ಗುಲಗಂಜಿ ತೂಕದಷ್ಟು ಭಾರದ ಗುಡಿಯೊಂದನ್ನು ಕಟ್ಟಿದರು. ಮತ್ತೆ ಎರಡೂ ಕ್ಷೇತ್ರಗಳನ್ನು ತೂಗಿದಾಗ ಅವು ಸಮಾನವಾಗಿದ್ದವು. ಹೀಗೆ ಗುಲಗಂಜಿ ತೂಕದ ಗುಡಿಕಟ್ಟಿದ್ದರಿಂದ ಆ ಗುಡಿಗೆ 'ಗುಲಗಂಜಿ ಮಾಧವರಾಯರ ಗುಡಿ' ಎಂಬ ಹೆಸರು ಬಂತಂತೆ.

### ೪. ಗಂಡ-ಹೆಂಡಿರ ಗುಂಡು

ಕಂಪ್ಲಿಗೆ ಹೋಗುವ ಮಾರ್ಗದಲ್ಲಿ,ವೆಂಕಟಾಪುರದ ಸಮೀಪ ಎರಡು ಮಾನವಾಕೃತಿಯ ಕಲ್ಲುಗುಂಡುಗಳಿದ್ದು, ಅವನ್ನು 'ಗಂಡ-ಹೆಂಡಿರ ಗುಂಡು' ಎಂದು ಕರೆಯಲಾಗುತ್ತದೆ. ಇದಕ್ಕೆ ಈ ಹೆಸರು ಬರಲು ಕಾರಣಗಳಿವೆ.

ಹಿಂದೆ ಒಂದು ಊರಿನಲ್ಲಿ ಗಂಡ ಹೆಂಡಿರಿಬ್ಬದ್ದರಂತೆ. ಅವರಿಗೆ ಬಹಳ ಕಾಲದವರೆಗೆ ಮಕ್ಕಳಾಗಲಿಲ್ಲ. ಯೋಚಿಸಿದ ದಂಪತಿಗಳು ಹಂಪಿಗೆ ಹರಕೆ ಹೋರಲು ಬಂದರು. ಪಂಪಾಕ್ಷೇತ್ರವನ್ನು ಪೂರ್ತಿ ಸುತ್ತಿದ ನಂತರ ಮಾಲ್ಯವಂತದಲ್ಲಿ ಪೂಜೆ ಮಾಡಿದರು. ಪೂಜೆ ಮುಗಿಸಿ ಹಿಂದಿರುಗಿ ಬರುವಾಗ ದಾರಿಯಲ್ಲಿ ಎರಡು ಕಲ್ಲು ಗುಂಡುಗಳು ಅಡ್ಡ ಬಿದ್ದಿದ್ದವಂತೆ. ಮಹಾಶಿವಭಕ್ತರಾದ ಆ ಗಂಡ-ಹೆಂಡಿರಿಬ್ಬರು. ಆ ಕಲ್ಲು ಗುಂಡುಗಳನ್ನು ಎತ್ತಿ ನಿಲ್ಲಿಸಿದರಂತೆ. ಈ ಕಾರಣವಾಗಿ ಅವುಗಳನ್ನು 'ಗಂಡ ಹೆಂಡಿರ ಗುಂಡು' ಎಂದು ಕರೆಯಲಾಗುತ್ತದೆಂದು ಜನರು ಹೇಳುತ್ತಾರೆ.

### ೫. ಗೋಪುರದಮ್ಮನ ಗೋಪುರ

ಹಂಪಿಯ ವಿರೂಪಾಕ್ಷ ದೇವಾಲಯದ ಪ್ರವೇಶದ್ವಾರದ ಮೊದಲನೆಯ ದೊಡ್ಡ ಗೋಪುರವನ್ನು 'ಹಿರಿಯ ಗೋಪುರ' ಅಥವಾ 'ಬಿಷ್ಟಪ್ಪಯ್ಯನ ಗೋಪುರ' ಎಂದು ಕರೆಯುತ್ತಾರೆ. ಬಿಷ್ಟಪ್ಪಯ್ಯ

ಎಂಬುವವನು ಈ ಗೋಪುರವನ್ನು ಕಟ್ಟಿಸಿದನೆಂದು ಜನ ಹೇಳುತ್ತಾರೆ. ಈ ಗೋಪುರದ ಮೊದಲಿನ ಎರಡು ಅಂತಸ್ತುಗಳನ್ನು ಕಲ್ಲಿನಿಂದ ಕಟ್ಟಲಾಗಿದ್ದು, ಉಳಿದ ಎಂಟು ಅಂತಸ್ತುಗಳನ್ನು ಗಾರೆಯಿಂದ ನಿರ್ಮಿಸಲಾಗಿದೆ. ಈ ಗೋಪುರವನ್ನು ನಿರ್ಮಿಸುವಾಗ ಕಟ್ಟಡ ಪದೇ ಪದೇ ಕುಸಿದು ಬೀಳುತ್ತಿತ್ತಂತೆ. ಆಗ ಹಿರಿಯರೆಲ್ಲ ಸೇರಿ ಪಂಚಾಂಗ ತೆಗೆಸಿ ಕಾರಣ ಕೇಳಿದಾಗ ಗರ್ಭಿಣಿ ಹೆಂಗಸನ್ನು ಬಲಿ ಕೊಡಬೇಕೆಂದು ತಿಳಿದುಬರುತ್ತದೆ. ಅದರಂತೆ ಬಿಷ್ಟಪ್ಪಯ್ಯನು ಗರ್ಭಿಣಿಯಾಗಿದ್ದ ತನ್ನ ಹಿರಿಯ ಸೊಸೆಯನ್ನು ಗೋಪುರದ ಗೋಡೆಯ ನಡುವೆ ಸೇರಿಸಿ ಗೋಪುರ ಕಟ್ಟುತ್ತಾರೆ. ಆಗ ಗೋಪುರ ಕುಸಿದು ಬೀಳುವುದು ನಿಲ್ಲುತ್ತದೆ. ಹೀಗೆ ಗೋಪುರ ಕಟ್ಟಲು ಪ್ರಾಣ ನೀಡಿದ ಆ ಹೆಂಗಸಿಗೆ 'ಗೋಪುರದಮ್ಮ' ಎಂದು ಹೆಸರಾಯಿತು. ಒಮ್ಮೊಮ್ಮೆ ಜೋರಾಗಿ ಗಾಳಿ ಬೀಸಿದಾಗ ಗೋಪುರದಮ್ಮ ಲಾಲಿ ಹಾಡುವುದು ಜನರಿಗೆ ಕೇಳಿಸುತ್ತದಂತೆ.

೬. ಪತಕನಿ ಮಡು

ಹಿಂದೆ ವಿಜಯನಗರದಲ್ಲಿ ಮತ್ತೂರ ಯಜಮಾನ ಎಂಬ ಪಾಳೇಗಾರನಿದ್ದನು. ಒಂದು ದಿನ ಉತ್ತರ ದಿಕ್ಕಿನಿಂದ ಇನ್ನೊಬ್ಬ ಪಾಳೇಗಾರ ಇವನ ಮೇಲೆ ದಾಳಿ ನಡೆಸಲು ಬಂದನು. ಆಗ ಮತ್ತೂರ ಯಜಮಾನನು ಕುಲಗುರುಗಳ ಸಲಹೆಯನ್ನು ಪಡೆದು, ಗುರುಗಳ ಸಲಹೆಯಂತೆ ರಾತ್ರಿಯಿಡೀ ಹಂಪಿ ಹೊಳೆಯನ್ನು ಪ್ರಾರ್ಥಿಸಿದನು. ಬೆಳಿಗ್ಗೆ ವಿರೋಧಿ ಪಾಳೇಗಾರನ ಸೈನ್ಯ ನೀರಿಗಿಳಿಯುತ್ತಿದ್ದಂತೆ ಅನಿರೀಕ್ಷಿತ ಪ್ರವಾಹ ಬಂದು ಇಡೀ ಸೈನ್ಯವೇ ನೀರಿನಲ್ಲಿ ಕೊಚ್ಚಿಕೊಂಡು ಹೋಯಿತಂತೆ. ಕೊಚ್ಚಿಕೊಂಡು ಹೋದ ಸ್ಥಳವನ್ನು 'ಪತಕನಿ ಮಡು' ಎಂದು ಕರೆಯುತ್ತಾರೆ. ಈ ಸ್ಥಳ ಈಗ ತುಂಗಭದ್ರಾ ಜಲಾಶಯದಲ್ಲಿ ಮುಳುಗಡೆಯಾಗಿದೆ ಎಂದು ಜನರು ಹೇಳುತ್ತಾರೆ.

೭. ಬಡವಿ ಲಿಂಗ

ಹಂಪಿಯ ಲಕ್ಷ್ಮೀನರಸಿಂಹನ ವಿಗ್ರಹದ ಸಮೀಪದಲ್ಲಿ ಕಂಡುಬರುವ ಏಕಶಿಲೆಯ ಬೃಹದಾಕಾರದ ಶಿವಲಿಂಗವನ್ನು 'ಬಡವಿಲಿಂಗ' ಎಂದು ಕರೆಯುತ್ತಾರೆ. ಈ ಹೆಸರು ಬರಲು ಎರಡು ಕಾರಣಗಳನ್ನು ನೀಡಲಾಗುತ್ತಿದೆ.

೧. ಒಬ್ಬ ಬಡ ಮುದುಕಿಯು ಹಂಪಿಯ ಸಮೀಪದ ಗ್ರಾಮವೊಂದರಲ್ಲಿ ವಾಸವಾಗಿದ್ದಳು. ಆಕೆ ದೊಡ್ಡ ಶಿವಭಕ್ತೆಯಾಗಿದ್ದಳು. ಪ್ರತಿದಿನ ಮುಂಜಾನೆ ಮತ್ತು ಸಂಜೆಯ ಸಮಯದಲ್ಲಿ ತಪ್ಪದೆ ಶಿವಪೂಜೆ ಮಾಡುತ್ತಿದ್ದಳು. ಆಕೆ ಆ ಸಮಯದಲ್ಲಿ ಎಲ್ಲೇ ಇರಲಿ, ಶಿವಲಿಂಗವನ್ನು ಅಂಗೈಯಲ್ಲಿ ಇಟ್ಟುಕೊಂಡು ಸ್ವಲ್ಪ ಹೊತ್ತು ಮನಸ್ಸಿನಲ್ಲಿ ಶಿವನನ್ನು ಧ್ಯಾನಿಸಿಕೊಳ್ಳುತ್ತಿದ್ದಳು. ಆಕೆ ಎಲ್ಲಿಗಾದರೂ ಪರ ಸ್ಥಳಕ್ಕೆ ಹೋಗಬೇಕಾದರೆ ಶಿವಪೂಜೆ ತಪ್ಪಬಹುದೆಂಬ ಭಯದಿಂದ ಶಿವಲಿಂಗವನ್ನು ತನ್ನ ಸೀರೆಯ ಸೆರಗಿನಲ್ಲಿ ಮಡಚಿ ಇಟ್ಟುಕೊಳ್ಳುತ್ತಿದ್ದಳಂತೆ. ಸೂರ್ಯನು ಮುಳುಗಿದ ತಕ್ಷಣ ಆಕೆ ಶಿವಲಿಂಗವನ್ನು ತೆಗೆದು ಪೂಜಿಸುತ್ತಿದ್ದಳಂತೆ. ಒಮ್ಮೆ ಆಕೆಯು ಹಂಪಿಯಲ್ಲಿ ಗದ್ದೆ ಕೆಲಸ ಮಾಡಲು ಬಂದಳು. ಕೆಲಸ ಮಾಡಿ ಆಕೆಗೆ ಬಾಯಾರಿಕೆಯಾಯಿತು. ನೀರಿಗಾಗಿ ಸುತ್ತಮುತ್ತ ನೋಡಿದಾಗ ಅಲ್ಲಿನ ಒಂದು ತಗ್ಗಿನಲ್ಲಿ ಸ್ವಲ್ಪ

ನೀರು ನಿಂತಿದ್ದು ಕಣ್ಣಿಗೆ ಬಿತ್ತು. ಮುದುಕಿಯು ಅಲ್ಲಿಗೆ ಹೋಗಿ ಕುಳಿತುಕೊಂಡು ಬಾಗಿ ಬೊಗಸೆಯಿಂದ ನೀರು ಕುಡಿದಳು. ಆಗ ಆಕೆಯ ಸೀರೆಯ ಸೆರಗಿನಲ್ಲಿದ್ದ ಶಿವಲಿಂಗವು ನೀರಿನಲ್ಲಿ ಬಿದ್ದು ಬಿಟ್ಟಿತು. ಆಕೆಗೆ ಬಹಳ ದುಃಖವಾಯಿತು. ಎಷ್ಟು ಹುಡುಕಾಡಿದರೂ ಶಿವಲಿಂಗ ಮಾತ್ರ ಸಿಗಲೇ ಇಲ್ಲ, ಸಂಜೆಯಾಯಿತು, ಶಿವಪೂಜೆಯ ಹೊತ್ತು ಸಮೀಪಿಸಿತು. ಆಗ ಆಕೆ 'ಅಯ್ಯೋ ಶಿವನನ್ನು ನೀರು ಪಾಲು ಮಾಡಿದೆನಲ್ಲಾ, ನನ್ನ ಈ ತಪ್ಪಿಗೆ ಪರಿಹಾರವೇ ಇಲ್ಲವೇ' ಎಂದು ಅಳುತ್ತಾ ಅಲ್ಲಿಯೇ ಕುಳಿತು ಬಿಟ್ಟಳಂತೆ. ಹೀಗೆ ಆಕೆ ಅನ್ನ, ನೀರನ್ನು ಬಿಟ್ಟು ಶಿವನನ್ನೇ ಧ್ಯಾನಿಸುತ್ತಾ ಅದೇ ಸ್ಥಳದಲ್ಲಿ ಇದ್ದು ಬಿಟ್ಟಳಂತೆ. ಆಗ ಆಕೆಯ ಭಕ್ತಿಗೆ ಮೆಚ್ಚಿ ಶಿವನು ಆ ನೀರಿನಿಂದ ಅದ್ಭುತ ಲಿಂಗಾಕಾರದಲ್ಲಿ ಮೇಲಕ್ಕೆ ಎದ್ದು ಬಂದನಂತೆ. ಅಂದಿನಿಂದಲೂ ಆ ಲಿಂಗಕ್ಕೆ 'ಬಡವಿ ಲಿಂಗ' ಎಂದು ಹೆಸರಾಗಿದೆ.

೨. ಇನ್ನೂ ಕೆಲವರು ಪ್ರಕಾರ, ಒಮ್ಮೆ ಪಂಪಾಪತಿ ಜಾತ್ರೆ ನಡೆಯುವಾಗ ಎಲ್ಲಾ ಭಕ್ತರೂ ಅಲ್ಲಿಗೆ ಬಂದು ಸೇರಿದರು. ಆಗ ಪಾರ್ವತಿಯು ಶಿವನನ್ನು ಕುರಿತು ನಮ್ಮ ಭಕ್ತರೆಲ್ಲಾ ಸುಡುವ ಬಿಸಿಲಿನಲ್ಲಿ ಬೇಯುತ್ತಿದ್ದಾರೆ. ನಾವು ಬೇಗ ಅಲ್ಲಿಗೆ ಹೋಗೋಣವೆಂದು ಹೇಳಿದಳು. ಆಗ ಶಿವನು 'ನನ್ನ ಭಕ್ತ ಬಂದಿಲ್ಲ, ಅವನು ಬರೋವವರೆಗೂ ನಾನು ರಥೋತ್ಸವಕ್ಕೆ ಬರುವುದಿಲ್ಲ' ಎಂದು ಹೇಳಿದನು. ಆಗ ಪಾರ್ವತಿಯು 'ಸ್ವಾಮಿ, ಇಷ್ಟೊಂದು ಭಕ್ತ ಸಮೂಹ ನೆರೆದಿರುವಾಗ ಇನ್ನೂ ನನ್ನ ಭಕ್ತ ಬಂದಿಲ್ಲ. ಅಂತಿದ್ದೀರಲ್ಲ ಯಾರು ಆ ಭಕ್ತ? ಎಂದು ಕೇಳಿದಾಗ ಶಿವನು 'ನೋಡು ಪಾರ್ವತಿ, ನನ್ನ ನಿಜವಾದ ಭಕ್ತ ಅಲ್ಲಿ ಬರುತ್ತಿದ್ದಾನೆ' ಎಂದು ಹೇಳಿ ಒಬ್ಬನನ್ನು ತೋರಿಸುತ್ತಾನೆ. ಆಗ ಪಾರ್ವತಿಯು ಇಷ್ಟೊಂದು ಜನ ಇರೋವಾಗ, ನೀವು ಅವನನ್ನೇ ನನ್ನ ಭಕ್ತ ಎನ್ನಲು ಕಾರಣವೇನು? ಎಂದು ಕೇಳಿದಾಗ, ಶಿವನು ಭಕ್ತರ ಪರೀಕ್ಷೆಗೆ ಸಜ್ಜಾಗುತ್ತಾನೆ. ಪಾರ್ವತಿಯನ್ನು ಕುರಿತು "ನೋಡು ನನ್ನ ಭಕ್ತನ ಭಕ್ತಿ ಪರೀಕ್ಷೆಗಾಗಿ ನಾವು ಒಂದು ಆಟವನ್ನು ಆಡೋಣ, ನಾನು ನೀರಿನಲ್ಲಿ ಬಿದ್ದೋಗ್ತಿನಿ. ನೀನು ನನ್ನ ಗಂಡನನ್ನು ಕಾಪಾಡಿ, ಕಾಪಾಡಿ ಅಂತ ಎಲ್ಲರನ್ನೂ ಕೂಗು. ನಿಜವಾದ ಭಕ್ತ ಬಂದು ನನ್ನನ್ನು ಕಾಪಾಡುತ್ತಾನೆ ಎಂದು ಹೇಳಿ ಶಿವನು ನೀರಿನಲ್ಲಿ ಬಿದ್ದಂತೆ ನಟಿಸುತ್ತಾನೆ. ಪಾರ್ವತಿಯು ನನ್ನ ಗಂಡ ನೀರಿನಲ್ಲಿ ಬಿದ್ದೋಗಿದ್ದಾರೆ ಕಾಪಾಡಿ, ಕಾಪಾಡಿ' ಎಂದು ಕೂಗುತ್ತಾಳೆ. ಜಾತ್ರೆಗೆ ಹೋಗುವ ಜನರನ್ನು ಕೈಮುಗಿದು ಕೇಳಿಕೊಳ್ಳುತ್ತಾಳೆ. ಆದರೆ ಅವರೆಲ್ಲ ಹೋಗಮ್ಮೋ ಜಾತ್ರೆಗೆ ಹೊತ್ತಾಗಿ ಹೋಗ್ತಾ ಇದ್ದೀವಿ ಮಧ್ಯೆ ನಿನ್ನದೊಂದು ಗೋಳು ಎಂದುಕೊಂಡು ಹಾಗೆಯೇ ಹೊರಟು ಹೋದರು. ಯಾರೂ ಸಹಾಯಕ್ಕೆ ಬರಲಿಲ್ಲ. ಆಗ ತಮ್ಮ 'ಧಣಿಯ ಮನೆಯಲ್ಲಿ ಕೆಲಸವನ್ನು ಮುಗಿಸಿ ತುಂಬ ಆತುರಾತುರರಾಗಿ ಜಾತ್ರೆಗೆ ಬರುತ್ತಿದ್ದ ಇಬ್ಬರು ದಂಪತಿ ಈ ಕೂಗನ್ನು ಕೇಳಿ ಅಲ್ಲಿಗೆ ಹೋಗುತ್ತಾರೆ. ತಾವು ಧರಿಸಿದ್ದ ಸೀರೆ, ಪಂಚೆಗಳನ್ನು ಕಳಚಿ ಎಸೆದು, ನೀರಿನಲ್ಲಿ ಬಿದ್ದಿದ್ದ ಮಾರುವೇಷದ ಶಿವನನ್ನು ಮೇಲಕ್ಕೆ ಎತ್ತಿದರಂತೆ. ಆಗ ಶಿವ ಮೆಚ್ಚಿ 'ನಿಮಗೆ ಏನು ಬೇಕು' ಎಂದು ಕೇಳಿದಾಗ ಆ ದಂಪತಿಗಳು - "ಸ್ವಾಮಿ ನಮ್ಮಂತಹ ಸಾಮಾನ್ಯ ಜನರಿಗೆ ನಿನ್ನ ದರ್ಶನ ದೊರಕುವುದು ಬಹಳ ಕಷ್ಟ. ಆದ್ದರಿಂದ ಬಡವರ ಹೆಸರಿನಲ್ಲಿ ಒಂದು ಲಿಂಗ ಸ್ಥಾಪಿಸು, ಇದರಿಂದ ಎಲ್ಲಾ ಜನಸಾಮಾನ್ಯರಿಗೂ ನಿನ್ನ ದರ್ಶನವಾದಂತಾಗುತ್ತದೆ" ಎಂದು ಕೇಳಿಕೊಂಡರಂತೆ. ಅದರಂತೆ ಶಿವ ಅವರಿಗೆ ಅನುಗ್ರಹಿಸಿ ಅವರ ಕೋರಿಕೆಯಂತೆ ಇತರ ಶಿವಲಿಂಗಗಳಿಗಿಂತ ದೊಡ್ಡದಾದ

ಶಿವಲಿಂಗವನ್ನು ಸ್ಥಾಪಿಸಿದ. ಅಂದಿನಿಂದ ಇದನ್ನು 'ಬಡವರ ಲಿಂಗ' ಅಥವಾ 'ಬಡವಿ ಲಿಂಗ' ಎಂದು ಕರೆಯುತ್ತಾರೆ.

೮. ಮನ್ಮಥಕುಂಡ / ಮನ್ಮಥಹೊಂಡ

ಶಿವನ ಘೋರ ತಪಸ್ಸನ್ನು ಭಂಗಗೊಳಿಸಿದ ಮನ್ಮಥನನ್ನು ಸುಟ್ಟು ಬಿಡಲು ಮೂರನೇ ಕಣ್ಣನ್ನು ತೆರೆದಾಗ ಮನ್ಮಥ ಸುಟ್ಟು ಹೋದ. ಜೊತೆಗೆ ಶಿವನ ಕಣ್ಣೆದುರಿದ್ದ ಬಂಡೆಯೂ ಕರಗಿ ನೀರಾಗಿ ಹರಿಯಿತು. ಹಾಗೆ ಬಂಡೆ ಕರಗಿದ ಜಾಗವೇ ಮನ್ಮಥಕುಂಡ. 'ಫಲಪೂಜೆ' ಮತ್ತು 'ಹಂಪಿ ಜಾತ್ರೆ'ಯ ದಿವಸ ಪಂಪಾಪತಿ ಮತ್ತು ಹಂಪಮ್ಮನವರು ಈ ಕುಂಡದ ತೆಪ್ಪದಲ್ಲಿ ವಿಹರಿಸುತ್ತಾರೆ ಎಂಬ ಐತಿಹ್ಯವಿದೆ.

೯. ಸೀತೆ ಸೆರಗು

ಹಂಪಿಯ ಸುಗ್ರೀವ ಗುಹೆಯ ಎದುರಿಗಿರುವ ಬಂಡೆಯ ಮೇಲೆ ಪಟ್ಟೆ ರೀತಿಯಲ್ಲಿ ಕಂಡುಬರುವ ಬಿಳಿಯ ಗೆರೆಗಳನ್ನು 'ಸೀತೆಯ ಸೆರಗು' ಎಂದು ಕರೆಯಲಾಗುತ್ತದೆ. ಸುಗ್ರೀವ ಗುಹೆಯಲ್ಲಿದ್ದ ಸೀತೆಯನ್ನು ರಾವಣನು ಬಲತ್ಕಾರದಿಂದ ಎಳೆದೊಯ್ಯುವಾಗ ಸೀತೆಯ ಸೆರಗು ಬಂಡೆಯ ಮೇಲೆ ಬಿದ್ದು ಈ ಗುರುತು ಆಯಿತು ಎಂಬ ನಂಬಿಕೆಯಿದೆ. ಮುಂದೆ ಸುಗ್ರೀವಾದಿ ಕಪಿಗಳು ಈ ಸೆರಗಿನ ಗುರುತನ್ನು ಆಧರಿಸಿಯೇ ಸೀತೆಯನ್ನು ಪತ್ತೆ ಮಾಡಲು ಸಾಧ್ಯವಾಯಿತು ಎಂದು ಜನ ಹೇಳುತ್ತಾರೆ.

೧೦. ರತ್ನಕೂಟ

ಹಂಪಿಯ ಹೇಮಕೂಟದ ಬಲಭಾಗಕ್ಕೆ ರತ್ನಕೂಟ ಕಂಡುಬರುತ್ತದೆ. ರತ್ನಕೂಟದ ಬಗ್ಗೆ ಎರಡು ಐತಿಹ್ಯಗಳಿವೆ.

ಮೊದಲನೆಯದಾಗಿ, ವಿಜಯನಗರದ ಸ್ಥಾಪನೆಗೆ ಶಕ್ತಿ ನೀಡಲೆಂದು ವಿದ್ಯಾರಣ್ಯರು ಭುವನೇಶ್ವರಿಯನ್ನು ಪ್ರಾರ್ಥಿಸಿದರಂತೆ ಆಗ ಭುವನೇಶ್ವರಿಯು ವಿದ್ಯಾರಣ್ಯರ ಪ್ರಾರ್ಥನೆಗೆ ಒಲಿದು ಕೆಲವು ಗಳಿಗೆಯ ಕಾಲ ಮುತ್ತು, ರತ್ನ, ಚಿನ್ನದ ಮಳೆ ಸುರಿಸಿದಳಂತೆ. ಹೀಗೆ ಮುತ್ತು ಸುರಿದ ಭಾಗ ಮುತ್ತಿನಕೂಟ, ರತ್ನ ಸುರಿದ ಭಾಗ ರತ್ನಕೂಟ ಹಾಗೂ ಚಿನ್ನ ಸುರಿದ ಭಾಗ ಹೇಮಕೂಟವಾಯಿತೆಂದು ಜನ ಹೇಳುತ್ತಾರೆ.

ಎರಡನೆಯ ಐತಿಹ್ಯದ ಪ್ರಕಾರ,

ವಿಜಯನಗರ ಸಾಮ್ರಾಜ್ಯವು ಅಂದಿನ ಕಾಲದಲ್ಲಿ ಬಹಳ ವೈಭವದಿಂದ ಮೆರೆದಿತ್ತು. ಅಂದು ಮುತ್ತು, ರತ್ನಗಳನ್ನು ಸೇರುಬಳ್ಳಗಳಿಂದ ಅಳೆದು ಮಾರುತ್ತಿದ್ದರು. ಹೀಗೆ ಸಕಲ ಸಂಪತ್ತಿನ ವ್ಯಾಪಾರ ಸ್ಥಾನವಾಗಿದ್ದ ಇಲ್ಲಿಗೆ ದೇಶದ ಹಲವಾರು ಭಾಗಗಳಿಂದ ವ್ಯಾಪಾರಿಗಳು ಬರುತ್ತಿದ್ದರು. ಆಗ ರಾಜರುಗಳು ಈ ವ್ಯಾಪಾರಿಗಳ ವಾಸ್ತವ್ಯಕ್ಕಾಗಿ ವಿವಿಧ ಪ್ರದೇಶಗಳನ್ನು ಬಿಟ್ಟು ಕೊಟ್ಟರು. ಹೀಗೆ ಹಂಪಿ ಬಜಾರಿಗೆ ಹೊಂದಿಕೊಂಡಂತಿರುವ ರತ್ನಕೂಟವನ್ನು ರತ್ನದ ವ್ಯಾಪಾರಿಗಳಿಗೆ ನೀಡಲಾಗಿತ್ತು. ಹೀಗಾಗಿ ಈ ಗುಡ್ಡಕ್ಕೆ 'ರತ್ನಕೂಟ' ಎಂದು ಹೆಸರು ಬಂದಿತೆಂದು ಹೇಳಲಾಗುತ್ತಿದೆ. ಈಗಲೂ ಸಹ ರತ್ನಕೂಟದಲ್ಲಿ ಮಾರ್ವಾಡಿಗಳ ದೇವಸ್ಥಾನ ಹಾಗೂ ಮಠವೊಂದು ಉಳಿದುಬಂದಿದೆ. ಗಣೇಶಚತುರ್ಥಿ ಮತ್ತು ದೀಪಾವಳಿ ಹಬ್ಬಗಳಂದು ವಿವಿಧ ಪ್ರದೇಶಗಳಿಂದ ಮಾರ್ವಾಡಿಗಳು ಇಲ್ಲಿಗೆ ಭೇಟಿ ನೀಡುತ್ತಾರೆ.

### ೧೧. ತಳವಾರ ಘಟ್ಟ

ಈ ತಳವಾರಘಟ್ಟವು ಹಿಂದೆ ತಳವಾರಿಕೆ ಮಾಡುವವರ ಊರಾಗಿತ್ತಂತೆ. ಆನೆಗುಂದಿಯ ಭಾಗದಿಂದ ಹಂಪಿಗೆ ಪ್ರವೇಶ ಮಾಡುವ ಪ್ರತಿಯೊಬ್ಬರೂ ಈ ನದಿ ತೀರದಿಂದಲೇ ಬರಬೇಕಾಗಿತ್ತು. ಇಂತಹ ಪ್ರದೇಶದಲ್ಲಿ ರಾಜರಿಗೆ ವಿಷಯ ಮುಟ್ಟಿಸುವ, ಮಾಹಿತಿ ನೀಡುವ, ಗಡಿರಕ್ಷಣೆ ಮಾಡುವ, ಬೇರೆ ಪ್ರದೇಶದಿಂದ ಬಂದ ವಸ್ತುಗಳಿಗೆ ಸುಂಕವನ್ನು ಹಾಕುವ ತಳವಾರ ಗ್ರಾಮವೊಂದಿತ್ತು. ಆದ್ದರಿಂದ ಈ ಸ್ಥಳಕ್ಕೆ 'ತಳವಾರ ಘಟ್ಟ' ಎಂದು ಹೆಸರು ಬಂತೆಂದು ಜನ ಹೇಳುತ್ತಾರೆ.

### ೧೨. ಜೋಳದ ರಾಶಿ ಗುಡ್ಡ

ವಿಜಯನಗರ ಕಾಲದಲ್ಲಿ ಇಬ್ಬರು ಅಮ್ಮತಮ್ಮಂದಿರು ಇದ್ದರು. ತಂದೆ ಕಾಲವಾದ ಅನಂತರ ಅಣ್ಣ-ತಮ್ಮಂದಿರು ಆಸ್ತಿ ಹಂಚಿಕೊಂಡರಂತೆ. ಅಣ್ಣ ಒಳ್ಳೊಳ್ಳೆಯ ಭೂಮಿ, ಮನೆಯನ್ನು ಆಯ್ಕೆ ಮಾಡಿಕೊಂಡು ತಮ್ಮನಿಗೆ ಕಲ್ಲು, ಕುರುಚಲು ಗುಡ್ಡದ ಹೊಲ ಹಾಗೂ ಸುರಿಯೋ ಮನೆ ಮತ್ತು ಮುದಿ ಎತ್ತುಗಳನ್ನು ಕೊಟ್ಟನಂತೆ. ಪಾಲಿಗೆ ಬಂದದ್ದು ಪಂಚಾಮೃತ ಎಂದು ಹೇಳಿಕೊಂಡು ವ್ಯವಸಾಯದ ಕೆಲಸ ಮಾಡುತ್ತಿದ್ದ. ಒಮ್ಮೆ ತಮ್ಮ ಚೆನ್ನಾಗಿ ಬೇಸಾಯ ಮಾಡಿ ಅಣ್ಣನಿಗಿಂತ ಹೆಚ್ಚಾಗಿ ಜೋಳ ಬೆಳೆಸಿದ. ಅಣ್ಣ ತಮ್ಮಂದಿಬ್ಬರೂ ಒಕ್ಕಣೆ ಮಾಡಲು ಅಕ್ಕಪಕ್ಕದಲ್ಲೆ ಜೋಳದ ರಾಶಿ ಮಾಡಿಕೊಂಡಿರುವಾಗ ತಮ್ಮನ ರಾಶಿ ದೊಡ್ಡದಿತ್ತು. ಅಣ್ಣನ ರಾಶಿ ಚಿಕ್ಕದಿತ್ತು. ತಮ್ಮ 'ಮನೆಗೆ ಊಟಕ್ಕೆ ಹೋಗುತ್ತೇನೆ, ನನ್ನ ರಾಶಿ ಕಡೆ ನೋಡಿಕೊಳ್ಳಿ' ಎಂದು ಹೇಳಿ ಮನೆಗೆ ಹೊರಟ. ಆಗ ಅಣ್ಣ ತಮ್ಮನ ರಾಶಿಯಿಂದ ಜೋಳವನ್ನು ತನ್ನ ರಾಶಿಗೆ ಸುರಿದುಕೊಂಡ. ತಮ್ಮ ವಾಪಾಸ್ಸು ಬಂದು ನೋಡಿದಾಗ ಅಣ್ಣನ ರಾಶಿ ಪೂರ್ಣವಾಗಿ ಮಣ್ಣಿನ ಗುಡ್ಡೆಯಾಗಿತ್ತು. ತಮ್ಮನ ರಾಶಿ ಹಾಗೆಯೆ ಇತ್ತು. ಹೀಗೆ ತಮ್ಮನ ಜೋಳದ ರಾಶಿಯಿಂದ ಜೋಳವನ್ನು ಕದ್ದ ಅಣ್ಣ ತನ್ನ ಜೋಳದ ರಾಶಿಯನ್ನು ದೊಡ್ಡದಾಗಿಸಿಕೊಂಡ. ಆದರೆ ಅದು ಮಣ್ಣಿನ ಗುಡ್ಡವಾಯಿತು. ಅಂದಿನಿಂದ ಮುಂದೆ 'ಜೋಳದ ರಾಶಿಯ ಗುಡ್ಡ' ಎಂದು ಹೆಸರಾಯಿತು. ಅಂದರೆ ಇದರಿಂದ ತಿಳಿದುಬರುವುದೇನೆಂದರೆ ಮೋಸ, ವಂಚನೆ, ಕಪಟತೆಗೆ ಎಂದು ಬೆಲೆ ಇರುವುದಿಲ್ಲ. ನ್ಯಾಯ, ನಿಷ್ಠೆ, ಸತ್ಯ, ಪರೋಪಕಾರಕ್ಕೆ ಹೆಚ್ಚಿನ ಬೆಲೆ ಇರುತ್ತದೆ. ಇದನ್ನು ಅಣ್ಣ, ತಮ್ಮನ ಹೋಲಿಕೆಯಲ್ಲಿ ಈ ಐತಿಹ್ಯ ಹುಟ್ಟಿಕೊಂಡಿರುವುದು ತಿಳಿಯುತ್ತದೆ. ಈ ರೀತಿಯ ಐತಿಹ್ಯಗಳು ಅಂದಿನ ಸಮಾಜದ ನ್ಯಾಯ ನಿಷ್ಠತೆಗೆ ಹಿಡಿದ ಕೈಗನ್ನಡಿಯಂತಿದೆ ಎಂದು ಹೇಳಬಹುದಾಗಿದೆ.

### ೧೩. ಹಂಪಿ ಪರಿಸರದ ಕಲ್ಲು ಬಂಡೆಗಳು

ಹಂಪಿಯಲ್ಲಿ ಹೇರಳವಾಗಿ ಕಲ್ಲುಗಳಿವೆ. ಇಲ್ಲಿ ಇಷ್ಟರಮಟ್ಟಿಗೆ ಕಲ್ಲುಗಳಿರಲು ಕಾರಣಗಳಿವೆ. ಏಕೆಂದರೆ ಶ್ರೀರಾಮನು ಕಪಿಸೇನೆಯನ್ನು ಕರೆದುಕೊಂಡು ಸೇತುವೆ ಕಟ್ಟುವಾಗ ಕಪಿಗಳಿಗೆ ಕಲ್ಲುಬಂಡೆಗಳನ್ನು ತರಲು ಹೇಳಿದ. ಅದರಂತೆ ಕಪಿಗಳು ಕಲ್ಲುಬಂಡೆಗಳನ್ನು ಹೊತ್ತು ತಂದವು. ಸೇತುವೆಯ ನಿರ್ಮಾಣ ಕೊನೆಗೊಂಡಾಗ ಶ್ರೀರಾಮನು ಕಪಿಗಳಿಗೆ ಸೇತುವೆ ಕಟ್ಟುವುದು ಮುಗಿಯಿತು, ಕಲ್ಲು ಸಾಕು ಎಂದನು. ಆಗ ಕಲ್ಲುಬಂಡೆಗಳನ್ನು ಹೊತ್ತು ತರುತ್ತಿದ್ದ ಕಪಿಗಳು ಅವುಗಳನ್ನು ಅಲ್ಲಲ್ಲೇ ಎಸೆದವಂತೆ. ಅಂದಿನಿಂದ ಹಂಪಿಯಲ್ಲಿ ಕಲ್ಲು ಬಂಡೆಗಳು ರಾಶಿ ರಾಶಿಯಾಗಿ ಬಿದ್ದಿವೆ ಎಂದು ಹೇಳಲಾಗುತ್ತಿದೆ.

೧೪. ಗುಗ್ಗರಿ ಗುಂಡಯ್ಯ

ಹಿಂದೆ ಭಕ್ತನೊಬ್ಬ ಹಂಪಿಯ ವಿರೂಪಾಕ್ಷನ ವರದಿಂದ ಗಂಡು ಮಗವನ್ನು ಪಡೆದನು. ಸಂತೋಷ ಗೊಂಡ ಆತ ಹಂಪಿಯಲ್ಲಿರುವ ಎಲ್ಲಾ ದೇವಾಲಯಗಳಿಗೂ ಕಡಲೆಕಾಳು, ಗುಗ್ಗರಿ ನೈವೇದ್ಯ ಮಾಡಿಸಲು ನಿಶ್ಚಯಿಸಿದ ಅದಕ್ಕಾಗಿ ಒಂದು ಪಲ್ಲದ ಚೀಲದಲ್ಲಿ ಕಡಲೆಕಾಳನ್ನು ಗುಗ್ಗರಿ ಮಾಡಿ ತಂದು, ಹಂಪಿಯಲ್ಲಿ ಕಂಡುಬರುವ ಎಲ್ಲಾ ಗುಡಿಗಳಿಗೂ ಒಂದೊಂದೇ ಕಾಳಿನಂತೆ ನೈವೇದ್ಯ ಅರ್ಪಿಸುತ್ತಾ ಬಂದ ಕೊನೆಗೆ ವಿರೂಪಾಕ್ಷ ದೇವಾಲಯದ ಹಿಂಬದಿಗೆ ಬರುವಾಗ ಅದು ಮುಗಿದು ಹೋಯಿತು. ಆಗ ಅಲ್ಲಿದ್ದ ದೇವರು ಕೋಪಗೊಂಡು ಎತ್ತರವಾದ ಬಂಡೆಯ ಮೇಲೇರಿ 'ನನಗೆ ಇಲ್ಲಿ ಸೇವೆ ಇಲ್ಲದಿದ್ದರೆ ನಾನು ಈ ಬಂಡೆಯ ಮೇಲಿಂದ ಬಿದ್ದು ಸಾಯುತ್ತೇನೆ' ಎಂದು ಹೇಳಿತಂತೆ. ಆಗ ಭಕ್ತನು ಪ್ರಾರ್ಥಿಸಿ ಆ ದೇವರಿಗೆ ಪ್ರತ್ಯೇಕ ಗುಗ್ಗರಿ ತರಿಸಿ ನೈವೇದ್ಯ ಮಾಡಿಸಿದನಂತೆ. ಹೀಗಾಗಿ ಈ ದೇವರಿಗೆ 'ಗುಗ್ಗರಿ ಗುಂಡಯ್ಯ' ಎಂದು ಹೆಸರು ಬಂದಿತು.

೧೫. ನಲ್ಲಾಪುರದ ಲಂಬಾಣಿ ಕೊಡುಗೆ

ಹಂಪಿ ಜಾತ್ರೆಯ ಹಾಗೂ ನಾಗರಪಂಚಮಿ ಸಂದರ್ಭದಲ್ಲಿ ಹಂಪಿ ಪರಿಸರದ ಸುತ್ತಮುತ್ತಲಿನ ಗ್ರಾಮಗಳಲ್ಲಿ ತೆಂಗಿನಕಾಯಿ ಗುದ್ದುವುದು, ನಿಂಬೆಹಣ್ಣು ಒಗೆಯುವುದು, ಗುಂಡು ಒಗೆಯುವುದು, ಓಡುವುದು, ಭಾರ ಎತ್ತುವುದು, ಸೈಕಲ್ ಸ್ಪರ್ಧೆ, ಎತ್ತಿನ ಬಂಡಿ ಸ್ಪರ್ಧೆ, ಇತ್ಯಾದಿ ಸ್ಪರ್ಧೆಗಳು ಸಾಮಾನ್ಯವಾಗಿ ನಡೆಯುತ್ತಿರುತ್ತವೆ. ಒಮ್ಮೆ ಹಂಪಿ ಜಾತ್ರೆಯಲ್ಲಿ ನೆರೆದ ಭಕ್ತರಲ್ಲಿ ಕೆಲವರು ಒಂದು ಸ್ಪರ್ಧೆಯನ್ನು ಏರ್ಪಡಿಸಿದರು. ಅದೇನೆಂದರೆ "ಹಂಪಿಯ ವಿರೂಪಾಕ್ಷನ ದೊಡ್ಡ ಗೋಪುರದ ತುದಿಯ ಮೇಲೆ ಹಾದು ಹೋಗುವಂತೆ ಗೋಪುರದ ಮುಂದಿನ ಮೂರು ಕಬ್ಬಿನ ತುಂಡನ್ನು ಎಸೆಯುವುದು". ಹಲವರು ಪ್ರಯತ್ನಪಟ್ಟು ಸೋತು ಹೋದರು. ಯಾರ ಕೈಯಿಂದಲೂ ಆ ಕೆಲಸ ಸಾಧ್ಯವಾಗಲಿಲ್ಲ. ಆಗ ಹಂಪಿ ಜಾತ್ರೆಗೆಂದು ಬಂದಿದ್ದ ಪಕ್ಕದ ಗ್ರಾಮವೊಂದರ ಲಂಬಾಣಿ ಮಹಿಳೆಯೊಬ್ಬಳು ತಾನು ಕಬ್ಬಿನ ತುಂಡನ್ನು ಗೋಪುರದ ತುದಿಯ ಮೇಲಿಂದ ಹಾದು ಹೋಗುವಂತೆ ಎಸೆಯುತ್ತೇನೆಂದು ಹೇಳಿ ಮುಂದೆ ಬಂದು ವಿರೂಪಾಕ್ಷನಿಗೆ ಕೈಮುಗಿದು ಕಬ್ಬಿನ ತುಂಡನ್ನು ಒಂದೇ ಬಾರಿಗೆ ಗೋಪುರದ ಮೇಲೆ ಹಾದು ಹೋಗುವಂತೆ ಎಸೆದುಬಿಟ್ಟಳು. ಆಗ ಆಕೆಯ ಸಾಹಸವನ್ನು ಮೆಚ್ಚಿ ಅಲ್ಲಿನ ಜನರೆಲ್ಲ ಆಕೆಯನ್ನು ಗೌರವಿಸಿ ಆಕೆಗೆ ನಲ್ಲಾಪುರದ ಬಳಿ ೨೦ ಎಕರೆ ಭೂಮಿಯೊಂದನ್ನು ಇನಾಮ್ ಆಗಿ ನೀಡಿದರಂತೆ. ಇನಾಮ್ ಆಗಿ ಪಡೆದ ಭೂಮಿಗೆ 'ಲಂಬಾಣಿ ಕೊಡುಗೆ' ಎಂದು ಕರೆಯುತ್ತಾರೆ.

•••

# ಅಧ್ಯಾಯ ಐದು

## ಸಮಾರೋಪ

ಇಂದು ಜಾನಪದ ಅಧ್ಯಯನ ವೈಜ್ಞಾನಿಕವಾಗಿ ನಡೆಯುತ್ತಿದೆ. ಅಲ್ಲದೇ ಈ ಕ್ಷೇತ್ರವನ್ನು ವಿದ್ವಾಂಸರು, ಅಧ್ಯಯನಕಾರರು, ವ್ಯಾಪಕ ಕ್ಷೇತ್ರಕಾರ್ಯದ ಮುಖೇನ ಹಲವಾರು ಮಗ್ಗಲುಗಳನ್ನು ಬಿಡಿಸುತ್ತಿದ್ದಾರೆ. ಮುಖ್ಯವಾಗಿ ಒಂದು ಕಾಲದಲ್ಲಿ ಜಾನಪದ ಕ್ಷೇತ್ರವನ್ನು ಉದಾಸೀನ ಮಾಡಲಾಗಿತ್ತು. ಆದರೆ ಇಂದು ಗಂಭೀರ ನೆಲೆಯಲ್ಲಿ ಅಧ್ಯಯನಗಳಾಗುತ್ತಿರುವುದನ್ನು ಗಮನಿಸಿದರೆ ಮೌಖಿಕ ಪರಂಪರೆಯ ಮಹತ್ತ್ವವು ತಿಳಿಯುತ್ತದೆ. ಮೌಖಿಕವಾಗಿ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಅಡಗಿಕೊಂಡಿರುವ ಗಾದೆ, ಒಗಟು, ಕಥೆ, ಹಾಡು, ಐತಿಹ್ಯ, ಮುಂತಾದ ಸಾಹಿತ್ಯದ ಪ್ರಕಾರಗಳು ತಮ್ಮದೇ ನೆಲೆಯಲ್ಲಿ ನಿಂತು ಶಿಷ್ಟ ಸಾಹಿತ್ಯಕ್ಕಿಂತ ಮಿಗಿಲೆಂಬಂತೆ ತನ್ನ ಛಾಪನ್ನು ಮೂಡಿಸಿವೆ.

ಯಾವುದೇ ಶಿಷ್ಟವೆನ್ನಬಹುದಾದ ಸಾಹಿತ್ಯ ಪರಂಪರೆಗೆ ಜಾನಪದದ ಪ್ರಭಾವ, ಪ್ರೇರಣೆಯಿರುವುದನ್ನು ಗುರುತಿಸಬಹುದು. ಅಂತೆಯೇ "ಜನವಾಣಿ ಬೇರು, ಕವಿವಾಣಿ ಹೂ" ಎಂದಿರುವುದು. ಇದರರ್ಥ ಮೌಖಿಕ ಪರಂಪರೆ ಎಂಬುದು ಕೇವಲ ಶಾಬ್ದಿಕವಾದ ಮಾತಲ್ಲ ಬದಲಾಗಿ ಅದೊಂದು ಸಂಸ್ಕೃತಿಯ ಪ್ರತಿಬಿಂಬ. ಚರಿತ್ರೆಯ ಕೊಂಡಿ, ಸಮಾಜದ ಬೇರು, ಜನಪದರ ಬಾಯಿಯಿಂದ ಹೊರಹೊಮ್ಮಿದ ಮಾತು ಕೇವಲ ಶಾಬ್ದಿಕ ಆಡಂಬರವಲ್ಲ, ಅದೊಂದು ಜೀವನಾನುಭವ. ಆ ಮೂಲಕ ಸಾಮಾಜಿಕ ಪರಿಸರದ ಘಟಕವಾದ ವ್ಯಕ್ತಿಗಳ ಸಮೂಹ ಸೃಷ್ಟಿಯಲ್ಲಿ ಸ್ಥಿರೀಕೃತಗೊಳ್ಳುತ್ತಲೇ 'ಜಾನಪದ ಸಾಹಿತ್ಯ'ವೆಂದು ಮೈದಳೆಯುತ್ತಿರುತ್ತದೆ.

ದಿನಂಪ್ರತಿ ಸಾಮಾಜಿಕ ಪರಿಸರದಲ್ಲಿ ಕಂಡುಂಡ ಅನುಭವವೇ ಸಾಹಿತ್ಯವಾಗಿ ಒಡಮೂಡುತ್ತದೆ. ಶಿಷ್ಟಸಾಹಿತ್ಯದಂತೆ, ಜಾನಪದದ ಸೃಷ್ಟಿಗೆ ಯಾವುದೇ ವ್ಯಾಕರಣದ ಹಂಗಿಲ್ಲ. ಅದು ತಾನೇ ವ್ಯಾಕರಣವಾಗಿ ಅಪ್ರಜ್ಞಾಪೂರ್ವಕ ನೆಲೆಯಲ್ಲಿ ಸೃಷ್ಟಿಯಾಗುವಂತಹದು. ಇದರಿಂದ ಉತ್ಪಾದನೆಯಾಗುವ ಮೌಖಿಕ ಪರಂಪರೆಯ ಎಲ್ಲಾ ಪ್ರಕಾರಗಳೂ ಜಾನಪದರ ಕಲಾಕೌಶಲ್ಯದಲ್ಲಿ ಕೆತ್ತಲ್ಪಟ್ಟ ಅಪೂರ್ವ ಕೃತಿಗಳಾಗುತ್ತವೆ. ಜಾನಪದರ ಈ ಬಗೆಯ ಸಾಹಿತ್ಯಕ್ಕೆ ವಸ್ತುವೆಂದರೆ ಜೀವನವೇ. ಇಲ್ಲಿ ಅಲೌಕಿಕ ಜಗತ್ತಿನ ವರ್ಣನೆಗೆ ಮಿಗಿಲಾಗಿ ಲೌಕಿಕದ ಅರಿವು ಹೆಚ್ಚಾಗಿರುತ್ತದೆ. ಅಂತೆಯೇ ಜಾನಪದ ಸತ್ವಯುತವಾದದ್ದು. ಜಾನಪದದ ಪ್ರಕಾರಗಳಾದ ಗಾದೆ, ಒಗಟು, ಕಥೆ, ಹಾಡುಗಳಿಗೆ ತನ್ನದೇ ಆದಂತಹ ಮಹತ್ತ್ವವಿದೆ. ಅದರಂತೆ ಐತಿಹ್ಯಕ್ಕೂ ವಿಶೇಷವಾಗಿ ಮಹತ್ತ್ವದ ಗುಣಗಳಿವೆ. ಐತಿಹ್ಯ ಎಂಬುದು ಒಂದು ವಸ್ತುವನ್ನು, ಒಬ್ಬ

ವ್ಯಕ್ತಿ, ಪ್ರಾಣಿಗಳನ್ನು ಕಂಡು ಆರೋಪಿಸಲಾದ ಇತ್ಯಾತ್ಮಕ ಕಥಾನಕ ಎನ್ನಬಹುದು. ಅಂದರೆ ಇಲ್ಲಿ ಹೇಳಲ್ಪಟ್ಟ ಸಾಮಾಗ್ರಿಯು ತನ್ನ ಮೂಲ ರೂಪಿಕೆಯ ಮುಖೇನ ಅಂತರಂಗದ ಗುಣಲಕ್ಷಣಗಳನ್ನು ಕಥನದ ಮೂಲಕ ಹೊರಹೊಮ್ಮಿಸುತ್ತಿರುತ್ತದೆ. ಹೇಳಲ್ಪಟ್ಟ ಸಾಮಾಗ್ರಿ ಹಾಗೂ ಪರಿಸರದ ಹಿನ್ನೆಲೆ ಈ ಎರಡೂ ಕಾರ್ಯಕಾರಣ ಸಂಬಂಧವನ್ನು ಬೆಸೆಯುತ್ತಿರುತ್ತದೆ. ಐತಿಹ್ಯದ ಕಥಿತ ಜಗತ್ತೇ ಒಂದು ಅದ್ಭುತ ಲೋಕವೆನ್ನಬಹುದು.

ಜಾನಪದದ ಎಲ್ಲಾ ಲಕ್ಷಣಗಳನ್ನು ಮೈಗೂಡಿಸಿಕೊಂಡೇ ರೂಪುಗೊಳ್ಳುವ ಈ ಐತಿಹ್ಯವು ಜೀವನಾನುಭವ ಮತ್ತು ಸಮಾಜದ ಅಂಗವಾಗಿಯೇ ಬೆಳೆಯುತ್ತಿರುತ್ತದೆ. ಐತಿಹ್ಯವು ಮುಖ್ಯವಾಗಿ ಒಂದು ಘಟನೆ, ವ್ಯಕ್ತಿ, ಸ್ಥಳವನ್ನು ತನ್ನ ಮೂಲ ಆಕರವನ್ನಾಗಿಸಿಕೊಂಡೇ ಸಾಗುವಂಥದ್ದು. ನಮ್ಮ ಗ್ರಾಮೀಣ ಸಮಾಜದಲ್ಲಿ ಭೌತಿಕ ವಸ್ತುಗಳನ್ನು ಕಂಡಾಗ ಅದನ್ನು ಇದ್ದಂತೆಯೇ ಹೇಳುವುದು ಸಪ್ಪೆಯೆನಿಸುತ್ತದೆ. ಈ ಕಾರಣಕ್ಕಾಗಿ ಬಿಡಿಬಿಡಿಯಾಗಿ ಮತ್ತು ಸಂಪೂರ್ಣವಾದ ನೆಲೆಯಲ್ಲಿ ಅದನ್ನು ಬೌದ್ಧಿಕ ನೆಲೆಯಲ್ಲಿ ಒಂದು ಕಥೆಯನ್ನು ಹೆಣೆಯುವುದು ಅವರಿಗೆ ಸಂತಸದ ವಿಷಯ. ಈ ಕುತೂಹಲ ಭಾರತದಾದ್ಯಂತ ಏಕರೀತಿಯಲ್ಲಿ ನಡೆದುಕೊಂಡು ಬಂದಿದೆ. ಕನ್ನಡ ಪರಿಸರದಲ್ಲಿ ಇದು ಸಮಕಾಲೀನ ಸಾಂಸ್ಕೃತಿಕ ಆಯಾಮ ಗಳನ್ನು ಕಾಲಾಂತರದಲ್ಲಿ ಚಿತ್ರಿಸುತ್ತಲೇ ಬರುತ್ತಿರುತ್ತದೆ. ಆಯಾಕಾಲದಲ್ಲಿ ಪರಿಸರದ ಅನ್ವಯ ಬದಲಾಗುವ ಸಮಾಜದ ಮನೋಧರ್ಮವನ್ನು ಐತಿಹ್ಯಗಳ ಮುಖಾಂತರ ಸೂಕ್ಷ್ಮವಾಗಿ ಅರಿಯಬಹುದು.

ಈ ಕಾರಣಕ್ಕಾಗಿಯೇ ಐತಿಹ್ಯಕ್ಕೆ ಒಂದು ನಿರ್ದಿಷ್ಟ ವ್ಯಾಖ್ಯಾನವೆಂಬುದು ನೆಪ ಮಾತ್ರ. ಇದು ಚಲನಶೀಲ ಗುಣವನ್ನು ಹೊಂದಿದೆ. ಒಂದು ಸಮಾಜ, ಸಂಸ್ಕೃತಿ, ಚರಿತ್ರೆ, ಮುಂತಾದ ಸಂಗತಿಗಳಿಗೆ ಬದ್ಧವಾಗುತ್ತಲೇ ಅದನ್ನು ವ್ಯಾಪಕವಾಗಿ ತನ್ನ ಒಡಲಲ್ಲಿ ಇರಿಸಿಕೊಂಡು ಮುಂದಿನ ಪೀಳಿಗೆಗೆ ಸಾಮಾಗ್ರಿ ಯಾಗಬಲ್ಲದು. ಈ ಕಾರಣದಿಂದ ಐತಿಹ್ಯಕ್ಕೆ ಮೌಖಿಕ ಪರಂಪರೆಯಲ್ಲಿ ವಿಶೇಷ ಸ್ಥಾನವಿದೆ. ಐತಿಹ್ಯವೊಂದರಲ್ಲಿ ಗಾದೆ, ಒಗಟು, ಕಥೆ, ಹಾಡು, ನಂಬಿಕೆ, ಆಚರಣೆ, ಎಲ್ಲವೂ ಒಂದಲ್ಲ ಒಂದು ಬಗೆಯಲ್ಲಿ ಐಕ್ಯವಾಗಿರುತ್ತವೆ. ಐತಿಹ್ಯದ ವಿವರಣೆಯಲ್ಲಿಯೇ. ಈ ಪ್ರಕಾರಗಳೆಲ್ಲವುಗಳ ಸಾಧ್ಯತೆಯನ್ನು ಗುರುತಿಸಬಹುದು, ಆದರೂ ಒಂದು ಶಿಸ್ತಿನ ನೆಲೆಯಲ್ಲಿ ಅವು ಬೇರೆಯಾಗಿಯೇ ನಿಲ್ಲುತ್ತವೆ. ಐತಿಹ್ಯ ಹೇಳುವ ವ್ಯಕ್ತಿಗಳ ಮೇಲೆಯೂ ಕಥಾಹಂದರವೆಂಬುದು ಹೇಗೆ ಒಂದು ಸಂಸ್ಕೃತಿಯ ಪ್ರತಿನಿಧಿಯಾಗಿ ಉಳಿಯುತ್ತದೆಂಬುದು ತಿಳಿಯುತ್ತದೆ. ಅಂದರೆ ಐತಿಹ್ಯವನ್ನು ಹೇಳುವ ನಿರೂಪಕರಿಂದ ಅಧ್ಯಯನದ ಮನಃಶಾಸ್ತ್ರೀಯ ಸಿದ್ಧಾಂತ ರೂಪಿಸಲು ಸಾಧ್ಯವಿದೆ. ಲಿಂಗಾಧಾರಿತ ನೆಲೆಯಲ್ಲಿ ಪ್ರಾದೇಶಿಕ ಪರಿಸರದ ಕೆಲವಾರು ವೈಶಿಷ್ಟ್ಯತೆಗಳನ್ನು ಕಂಡುಕೊಳ್ಳಬಹುದಾಗಿದೆ.

ಐತಿಹ್ಯವೆಂಬುದು ಮೌಖಿಕ ಪರಂಪರೆಯ ಒಂದು ಭಾಗ ಮಾತ್ರವಲ್ಲ. ಆದರೆ ಅದೊಂದು ಚರಿತ್ರೆಯೂ ಹೌದು, ಸಂಸ್ಕೃತಿಯೂ ಹೌದು. ಚರಿತ್ರೆಯನ್ನು ಕಟ್ಟುವಲ್ಲಿ ಲಿಖಿತ ಮೂಲಾಧಾರಗಳೊಂದಿಗೆ ಭೌತಿಕ ವಸ್ತುಗಳನ್ನೇ ಬೆನ್ನೆತ್ತುವ ಚರಿತ್ರಕಾರರು ಮೌಖಿಕ ಆಕರಗಳ ಕಡೆ ಗಮನಹರಿಸಿರುವುದು

ಕಂಡುಬರುವುದಿಲ್ಲ. ಇಂತಹ ಚರಿತ್ರೆಯು ಕೆಲವಾರು ಕೊರತೆಗಳಿಂದ ಪೂರ್ಣವಾಗಲಾರದೆನ್ನಬಹುದು. ಉಳಿದೆಲ್ಲಾ ಆಕರಗಳಿಂದ ಇತಿಹಾಸದ ಕೆಲವು ಸಂಗತಿಗಳು ಹೊರಬೀಳದೇ ಮೌನವಾದಲ್ಲಿ ಐತಿಹ್ಯವು ನೆರವಿಗೆ ಬರುತ್ತದೆ. ಅಂತೆಯೇ ಚರಿತ್ರೆಯ ಇತರ ಆಕರಗಳಂತೆ ಇದು ಕೂಡ ಮುಖ್ಯ ಆಕರವಾಗಿದೆ ಎನ್ನಬಹುದು.

ಬಹುಮುಖ್ಯವಾಗಿ ಇಂದು ಪ್ರಾದೇಶಿಕ ಇತಿಹಾಸವನ್ನು ಮತ್ತೊಮ್ಮೆ ಕಟ್ಟಬೇಕಾಗಿದೆ. ಅದರಲ್ಲಿಯೂ ಮೌಖಿಕ ಚರಿತ್ರೆಯ ಕಡೆ ಹೆಚ್ಚು ಗಮನಹರಿಸಬೇಕಾಗಿದೆ. ಈ ಬಗೆಯ ಪ್ರಾದೇಶಿಕ ಅಥವಾ ಸ್ಥಳೀಯ ಚರಿತ್ರೆಯ ರಚನೆಗೆ ಐತಿಹ್ಯವೇ ಪ್ರಮುಖ ಆಕರವಾಗುತ್ತದೆಂಬುದು ಗಮನಾರ್ಹ ಸಂಗತಿ. ಐತಿಹ್ಯ ಸಮಗ್ರ ಚರಿತ್ರೆಯನ್ನು ಸತ್ಯವಾಗಿ ಬಿಚ್ಚಿಡಲಾರದಾದರೂ ಹಲವಾರು ಚಾರಿತ್ರಿಕ ಎಳೆಗಳನ್ನು ತನ್ಮೂಲಕ ಪಸರಿಸುತ್ತದೆ. ಆ ಮೂಲಕ ಚಾರಿತ್ರಿಕ ಐತಿಹ್ಯಗಳು ಮಹತ್ತ್ವ ಪಡೆಯುತ್ತವೆ. 'ಇತಿಹಾಸ' ಎಂಬುದು ಗ್ರಾಮ ಸಮಾಜದಲ್ಲಿ ಮೌಖಿಕಗೊಂಡು ಶಿಷ್ಟಪದದ ಮಾರುವೇಷದಲ್ಲಿ ಸತ್ಯವನ್ನು ಅಂತರಂಗದಲ್ಲಿ ಅಡಗಿಸಿಕೊಂಡಿರುತ್ತದೆ. ಮಾರುವೇಷವನ್ನು ಜಾಗರೂಕತೆಯಿಂದ ಬಿಡಿಸಿದಲ್ಲಿ ಚರಿತ್ರೆಯ ನಿಜಾಂಶವನ್ನು ಆರಿಸಿಕೊಳ್ಳಬಹುದು.

ಐತಿಹ್ಯವು ಸಂಸ್ಕೃತಿಯೊಂದರ ಪ್ರತಿನಿಧಿಯಾಗಿ ತನ್ನೊಳಗೆ ನಂಬಿಕೆ, ಆಚರಣೆ, ಪುರಾಣ, ವ್ಯಕ್ತಿಘಟನೆ ಹೀಗೆ ಹಲವಾರು ವಸ್ತುವಿಷಯಗಳನ್ನು ಒಳಗೊಂಡಿರುತ್ತದೆ. ಕನ್ನಡ ಸಂಸ್ಕೃತಿಯನ್ನು ಬಿಂಬಿಸುವಲ್ಲಿ ಇವುಗಳ ಪಾತ್ರ ಅಗತ್ಯ ಮತ್ತು ಅಷ್ಟೇ ಮಹತ್ತ್ವದ್ದಾಗಿದೆ. ಸಮಕಾಲೀನ ಸಮಾಜದಲ್ಲಿ ಯಾವುದೋ ಒಂದು ಕೆಲಸಕ್ಕೆ ಸಹಾಯ ಮಾಡಿದ, ಪ್ರಾಣಾರ್ಪಣೆ ಮಾಡಿದ ವ್ಯಕ್ತಿಗಳ ಕುರಿತು ಇಲ್ಲವೇ ರಾಜರ, ಮಂತ್ರಿಗಳ, ಯುವರಾಜರ, ರಾಣಿಯರ ಕುರಿತು ಕಥೆಗಳು ಒಂದು ಘಟನೆಯ ಮುಖೇನ ಪ್ರಾಕೃತಿಕವಾದ ಗಿಡ, ಮರ, ಕಲ್ಲು, ದಿನ್ನೆ, ಪರ್ವತ, ಕೋಟೆ ಎಂಬ ಅಂಶಗಳಿಗೆ ಆರೋಪಿತವಾಗುತ್ತಿರುತ್ತದೆ. ಈ ನೆಪದಲ್ಲಿಯೇ ಇತಿಹಾಸ, ಸಂಸ್ಕೃತಿ ಎಂಬುದು ಮಾತಿನಲ್ಲಿ ಉಳಿದುಬರುತ್ತಿರುತ್ತದೆ. ಐತಿಹ್ಯ ಪದವು ಇತಿಹಾಸದಂತೆ 'ಇತಿ', 'ಇತಿಹ' ಎಂಬ ಸಂಸ್ಕೃತ ರೂಪದಿಂದ ನಿಷ್ಪನ್ನವಾಗಿದೆ. ಆದರೆ ಐತಿಹ್ಯವು ಜನಪದದ ಮೌಖಿಕ ಇತಿಹಾಸವಾಗಿ ಒಂದು ಬಗೆಯ ಇತಿಹಾಸದ ಅರ್ಥವನ್ನು ಸಹ ಇದು ಒಳಗೊಳ್ಳುತ್ತದೆ. ಆದರೆ ಸ್ವರೂಪ - ಲಕ್ಷಣಗಳಿಂದ ಭಿನ್ನತೆಯೂ ಇದೆ. ಐತಿಹ್ಯಗಳಿಗೆ ಕಾಲದ ನಿರ್ದಿಷ್ಟತೆಯಾಗಲೀ ಅಥವಾ ದಾಖಲೆಗಳಾಗಲೀ ಇರುವುದಿಲ್ಲ. ಆದರೆ ಐತಿಹ್ಯದ ನಿರೂಪಕರು ತಮ್ಮ ನಿರೂಪಣೆಗೆ ಬೇಕಾದ ಆಧಾರಗಳನ್ನು ನೀಡುತ್ತಾರೆ. ಇಲ್ಲಿ ಅವಶೇಷ, ಪಳೆಯುಳಿಕೆ, ವಸ್ತು, ಸ್ಥಳ, ಕೆರೆಕಟ್ಟೆ, ಕಲ್ಲು-ಬಂಡೆ, ಬೆಟ್ಟ-ಗುಡ್ಡ, ಉಡುಗೆ-ತೊಡುಗೆ, ಆಯುಧ, ಪ್ರಾಣಿ, ವ್ಯಕ್ತಿ, ದೈವ, ದೆವ್ವ, ಹಳ್ಳ, ನದಿ, ಹೀಗೆ ಯಾವುದು ಬೇಕಾದರೂ ಐತಿಹ್ಯಕ್ಕೆ ಆಧಾರವಾಗಬಹುದು. ಐತಿಹ್ಯದ ಬೀಜದಿಂದ ಪುರಾಣ, ಕಥನಗಳು ಹುಟ್ಟಿ ಬೆಳೆಯುತ್ತವೆ. ಯಾವುದೇ ಸ್ಥಳ, ವ್ಯಕ್ತಿ, ಐತಿಹ್ಯಗಳಲ್ಲಿ ಘಟನೆ ಸಂಭವಿಸಿರುವುದನ್ನು ಗುರುತಿಸಬಹುದು. ಯಾವ ಐತಿಹ್ಯಗಳೇ ಇರಲಿ, ಒಂದು ಚಿಕ್ಕ ಸನ್ನಿವೇಶ ಅಥವಾ

ಘಟನೆಯೊಂದು ಜರುಗಿ ಐತಿಹ್ಯ ಸೃಷ್ಟಿಯಾಗಿರುತ್ತದೆ. ಘಟನೆಯಿಲ್ಲದೇ ಸಹಜವಾಗಿ ಐತಿಹ್ಯಗಳು ಹುಟ್ಟಿಕೊಂಡಿರುವುದು ತೀರ ಕಡಿಮೆಯೇನೋ? ಘಟನೆ ಪ್ರಧಾನವಾಗಿ ಅಲ್ಲದಿದ್ದರೂ ಅಪ್ರಧಾನವಾಗಿ ಯಾದರೂ ಐತಿಹ್ಯಗಳಲ್ಲಿ ಸೇರಿಕೊಂಡಿರುವ ಸಾಧ್ಯತೆ ಹೆಚ್ಚು ಇದೆ.

ಸ್ಥಳ ಐತಿಹ್ಯದಲ್ಲಿ ಕೆಲವೊಂದು ವಿಶಿಷ್ಟ ಘಟನೆ ಇಲ್ಲವೇ ಸಂಗತಿ ಐತಿಹ್ಯಗಳ ಸ್ಥಾಯಿ ಭಾಗವಾಗಿರುತ್ತವೆ. ವಿಜಯನಗರ ಸಾಮ್ರಾಜ್ಯ ಮತ್ತು ಸಣ್ಣಪುಟ್ಟ ಪಾಳೆಪಟ್ಟುಗಳ ಉದಯ, ಏಳಿಗೆ, ನಾಶದ ಕುರಿತು ಸಾಕಷ್ಟು ಐತಿಹ್ಯಗಳು ಸಿಗುತ್ತವೆ. ವಿಜಯನಗರ ಸಾಮ್ರಾಜ್ಯದ ಪತನದ ನಂತರ ಪಾಳೆಗಾರರ ಸಂಸ್ಥಾನಗಳು ಬೆಳಕಿಗೆ ಬಂದ ನಂತರ ಅವರ ಸಾಮಾಜಿಕ, ಐತಿಹಾಸಿಕ, ಧಾರ್ಮಿಕ, ಸಾಂಸ್ಕೃತಿಕ ಚರಿತ್ರೆಯನ್ನು ಶಿಷ್ಟ ಚರಿತ್ರೆಯು ತಿರಸ್ಕರಿಸಿರುವುದನ್ನು ಐತಿಹ್ಯಗಳು ಮೌಖಿಕ ಇತಿಹಾಸವನ್ನು ಕಟ್ಟಿಕೊಡುವುದು ಇಲ್ಲಿ ಐತಿಹ್ಯಗಳ ಮಹತ್ತ್ವವೆನಿಸುತ್ತದೆ. ಹಂಪಿ ಪರಿಸರದ ಚರಿತ್ರೆಯನ್ನು ಮೌಖಿಕ ಪರಂಪರೆಯ ಐತಿಹ್ಯಗಳು ಭಿನ್ನ ನೆಲೆಯಲ್ಲಿ ಕಟ್ಟಿಕೊಡುತ್ತವೆ. ಶ್ರೀಸಾಮಾನ್ಯನಿಗೆ ವಿಜಯನಗರದ ಸಾಮ್ರಾಜ್ಯದಲ್ಲಿನ ಸ್ಥಾನಮಾನವನ್ನು ಕುರಿತಾಗಿ ಸ್ಪಷ್ಟ ಕಲ್ಪನೆ ಈ ಅಧ್ಯಯನದಿಂದ ತಿಳಿದುಬರುತ್ತದೆ.

ಐತಿಹ್ಯಗಳಿಂದ ಚರಿತ್ರೆಗೆ ವಿರುದ್ಧವಾದ ಮೌಖಿಕ ಚರಿತ್ರೆ ನಿರೂಪಿತವಾಗುತ್ತದೆ. ಯಾವುದು ಲಿಖಿತ ಇತಿಹಾಸದಿಂದ ತಿರಸ್ಕರಿಸುವುದೋ ಅದನ್ನು ಜನಪದ ಇತಿಹಾಸ ಕಟ್ಟಿಕೊಡಲು ಯತ್ನಿಸುತ್ತದೆ ಎಂಬುದನ್ನು ಐತಿಹ್ಯಗಳ ಅಧ್ಯಯನದಿಂದ ಗುರುತಿಸಲಾಗಿದೆ. ಇಲ್ಲಿ ಅಂತಃಶಕ್ತಿಯ, ಪವಾಡದ, ಸ್ಥಳ ಮಹಿಮೆ ಕ್ಷೇತ್ರ ಮಹಿಮೆಯ ಬಗೆಗಿನ ಐತಿಹ್ಯಗಳ ಆಶಯದ ಹಿನ್ನೆಲೆಯನ್ನು ಗುರುತಿಸಲು ಸಾಧ್ಯವಾದರೆ ಇತಿಹಾಸದ ಪ್ರಾಥಮಿಕ ಅಲ್ಲದಿದ್ದರೂ ಅನುಷಂಗಿಕ ಆಕರ ಸಾಮಾಗ್ರಿಗಳಾಗಿ ಬಳಸಿಕೊಳ್ಳಲು ಅಡ್ಡಿಯಿಲ್ಲ. ಈ ಮಾತಿಗೆ ಪೂರಕವಾಗಿ ಪ್ರಸ್ತುತ ಅಧ್ಯಯನದ ಅನೇಕ ಅಂಶಗಳು ಸಾಕ್ಷಿಯಾಗಿ ಮೂಡಿಬಂದಿವೆ ಎಂದರೂ ತಪ್ಪಾಗಲಾರದು.

•••

# ಅನುಬಂಧಗಳು

ಅನುಬಂಧ-೧ : ಆಕರಗಳು

ಅನುಬಂಧ-೨ : ವಕ್ತೃಗಳ ವಿವರ

ಅನುಬಂಧ-೩ : ಛಾಯಾಚಿತ್ರಗಳು

# ಅನುಬಂಧ-೧

# ಆಕರಗಳು


**ಪ್ರಾಥಮಿಕ ಆಕರಗಳು ಹಾಗೂ ಪೂರಕ ಸಾಹಿತ್ಯ**

೧. ಅಂಬಳಿಕೆ ಹಿರಿಯಣ್ಣ., (೧೯೯೪), ಜಾನಪದ ಲೋಚನ, ಬೆಂಗಳೂರು; ಪ್ರಜ್ವಲ ಪ್ರಕಾಶನ.

೨. ಅಂಬಳಿಕೆ ಹಿರಿಯಣ್ಣ., (೨೦೦೦), ಜನಪದ ಪ್ರಕ್ರಿಯೆ; ಹಾಂಕೋದೃಷ್ಟಿ, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ; .

೩. ಆರ್ಚಿಯಸ್ ಸುಂದರಂ., (೧೯೭೬), ಜನಪದ ಸಾಹಿತ್ಯದ ಮೂಲತತ್ವಗಳು, ಮೈಸೂರು; ಅರ್ಕಾವತಿ ಪ್ರಕಾಶನ.

೪. ಈಶ್ವರಪ್ಪ, ಎಂ.ಜಿ. ಶಿವಾರಂ. ಪ.ನಂ. (ಸಂ), (೧೯೯೭), ಜಾನಪದ ಗಂಗೋತ್ರಿ, ಬೆಂಗಳೂರು; ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ.

೫. ಉಡುಪ, ಕೆ.ಎಸ್.ಎನ್., (೨೦೦೧), ಶ್ರೀ ಕ್ಷೇತ್ರ ಕೊಟೇಶ್ವರ, ಸುಬ್ರಹ್ಮಣ್ಯ, ದಕ್ಷಿಣ ಕನ್ನಡ ಜಿಲ್ಲೆ; ಸುದರ್ಶನ ಪ್ರಕಾಶನ.

೬. ಉಮಾಪತಿ.ಬಿ., (೨೦೦೨), ಕಡಲಬಾಳ ಆಂಜನೇಯಸ್ವಾಮಿ ಸಾಂಸ್ಕೃತಿಕ ಅಧ್ಯಯನ, (ಅಪ್ರಕಟಿತ ಎಂ.ಫಿಲ್. ನಿಬಂಧ), ಕನ್ನಡ ವಿಶ್ವವಿದ್ಯಾಲಯ; ಹಂಪಿ.

೭. ಕರಿಬಸಪ್ಪ.ಎ., (೨೦೦೩), ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ಕಲಬುರ್ಗಿ, ಎಂ.ಎಂ., (೧೯೮೭), ಜನಪದ ಸಾಹಿತ್ಯ ಭಾಗ-II, ಧಾರವಾಡ; ಕರ್ನಾಟಕ ವಿಶ್ವವಿದ್ಯಾಲಯ.

೯. ಕಲಬುರ್ಗಿ, ಎಂ.ಎಂ., (೧೯೯೪), ಕರ್ನಾಟಕದ ಕೈಫಿಯತ್ತುಗಳು, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ಕುಂಬಾಸ, (೧೯೯೦), ಸಾಂಸ್ಕೃತಿಕ ದರ್ಶನ ಬಳ್ಳಾರಿ ಜಿಲ್ಲೆ, ಕುಂಚೂರು; ಶ್ರೀ ಮಾಲತೇಶ ಪ್ರಕಾಶನ.

೧೧. ಕೃಷ್ಣಾರೆಡ್ಡಿ.ಕೆ., (೧೯೯೪), ಗಾದೆಯ ಕಥೆಗಳು, ಬೆಂಗಳೂರು; ಜಾನಪದ ಮತ್ತು ಯಕ್ಷಗಾನ ಅಕಾಡೆಮಿ.

೧೨. ಕೆರೆಟ್ಟಿ ಗುರುನಾಥರೆಡ್ಡಿ., (೧೯೯೭), ನುಡಿಗಟ್ಟು, ಒಳಗುಟ್ಟು, ಕಲ್ಬುರ್ಗಿ; ಏಕಾಕ್ಷರ ಪ್ರಕಾಶನ.

೧೩. ಕ್ಯಾತನಹಳ್ಳಿ ರಾಮಣ್ಣ., (೧೯೮೫), ಜನಪದ ವಿಹಾರ, ಬೆಂಗಳೂರು; ದಿನಕರ ಪ್ರಕಾಶನ.

೧೪. ಕೊಟ್ರೇಶ್.ಎಂ., (೨೦೦೧), ಉಚ್ಚಂಗಿದುರ್ಗ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ, (ಅಪ್ರಕಟಿತ ಎಂ.ಫಿಲ್. ಕಿರುಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ಕೊಟ್ರಯ್ಯ.ಸಿ.ಟಿ.ಎಂ., (೨೦೦೧), ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬. ಗೋವಿಂದ., (೨೦೦೨) ಬಳ್ಳಾರಿ ಜಿಲ್ಲೆ ಗ್ರಾಮದೇವತೆಗಳು, (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭. ಗೋವಿಂದರಾಜು.ಸಿ.ಆರ್., (೨೦೦೫), ಹಂಪೆ-ವಿಜಯನಗರ, ಬಳ್ಳಾರಿ; ಜಿಲ್ಲಾಧಿಕಾರಿಗಳು, ಜಿಲ್ಲಾಡಳಿತ.

೧೮. ಚಂದ್ರಶೇಖರ ಕಂಬಾರ., (೧೯೮೫), ಕನ್ನಡ ಜಾನಪದ ವಿಶ್ವಕೋಶ, ಬೆಂಗಳೂರು; ಕನ್ನಡ ಸಾಹಿತ್ಯ ಪರಿಷತ್ತು.

೧೯. ಚಲುವರಾಜು., (೨೦೦೦), ಹಂಪಿ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦. ಚಿಕ್ಕಣ್ಣಯೆಣ್ಣೆಕಟ್ಟೆ., (೨೦೦೧), ತುಮಕೂರು ಜಿಲ್ಲಾ ಜಾನಪದ ಸಾಹಿತ್ಯ, ಸಿರಾ; ಗಡಿನಾಡ ಜಾನಪದ ಸಂಪರ್ಕ ಕೇಂದ್ರ, ಕಾಳಿದಾಸನಗರ.

೨೧. ಚಿದಾನಂದಮೂರ್ತಿ ಎಂ., (೧೯೭೫), ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು', ಬೆಂಗಳೂರು; ಐ.ಬಿ.ಎಚ್. ಪ್ರಕಾಶನ.

೨೨. ಚಿದಾನಂದಮೂರ್ತಿ.ಎಂ., (೧೯೭೭), ಗ್ರಾಮೀಣ, ಬೆಂಗಳೂರು; ಮಲ್ಲಿಗೆ ಗ್ರಂಥಮಾಲೆ-೩೧.

೨೩. ಚಿದಾನಂದಮೂರ್ತಿ.ಎಂ., (೧೯೯೧), ಕರ್ನಾಟಕ ಸಂಸ್ಕೃತಿ, ಬೆಂಗಳೂರು; ಕನ್ನಡ ಸಾಹಿತ್ಯ ಪರಿಷತ್ತು.

೨೪. ಚಿದಾನಂದಮೂರ್ತಿ.ಎಂ., (೨೦೦೨), ಜನ-ಜನಪದ-ಜಾನಪದ, ಬೆಂಗಳೂರು; (ಸಮಗ್ರ ಸಂಪುಟ-೩), ಬೆಂಗಳೂರು; ಸಪ್ನಬುಕ್‌ಹೌಸ್.

೨೫. ಚಿದಾನಂದಮೂರ್ತಿ.ಎಂ., ೧೯೯೮, ಹೊಸತು, ಹೊಸತು, ಬೆಂಗಳೂರು; ಕನ್ನಡ ಪುಸ್ತಕ ಪ್ರಾಧಿಕಾರ.

೨೬. ಚೆನ್ನಬಸವೇಶ್ವರ ಬಳ್ಳಾರಿ., (೧೯೮೭), ಚೆಳ್ಳಗುರ್ಕಿ ಶ್ರೀ ಎರ್ರಿಸ್ವಾಮಿಗಳ ಲೀಲಾವಿಲಾಸ, ಬಳ್ಳಾರಿ; ಟ್ರಸ್ಟ್ ಕಮಿಟಿ, ಚೆಳ್ಳಗುರ್ಕಿ.

೨೭. ಜೋಳದ ರಾಶಿ ದೊಡ್ಡನ ಗೌಡರು, (೧೯೯೯), ಚೆಳ್ಳಗುರ್ಕಿ ಶ್ರೀ ಎರ್ರಿಸ್ವಾಮಿಗಳ ಶಿವಮಯ ಜೀವನ ಚರಿತ್ರೆ, ಬಳ್ಳಾರಿ; ಟ್ರಸ್ಟ್ ಕಮಿಟಿ, ಚೆಳ್ಳಗುರ್ಕಿ.

೨೮. ದೀಕ್ಷಿತ್.ಜಿ.ಎಸ್., (ಸಂ), ವಿಶ್ವೇಶ್ವರ. ಎಂ.ಎ., (ಸ.ಸಂ), (೧೯೯೧), ಸಂಗಮರ ಕಾಲದ ವಿಜಯನಗರ, ಬೆಂಗಳೂರು; ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ.

೨೯. ದೇವರಕೊಂಡಾ ರೆಡ್ಡಿ (ಸಂ), (೨೦೦೬), ಹಂಪಿ ಸಂಪುಟ, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೦. ನಾಯಕ. ಹಾ.ಮಾ., ಕನ್ನಡ ವಿಶ್ವಕೋಶ, ಮೈಸೂರು; ಮೈಸೂರು ವಿಶ್ವವಿದ್ಯಾಲಯ.

೩೧. ಪರಮೇಶ್ವರಪ್ಪ.ಟಿ.,(ಸಂ) (೧೯೯೬), ಹಂಪಿ ಪರಂಪರೆ, ಹೊಸಪೇಟೆ; ಶ್ರೀ ವಿದ್ಯಾ ವಿಜಯನಗರ ಹಂಪಿ ಹೆರಿಟೇಜ್ ಟ್ರಸ್ಟ್.

೩೨. ಪುರುಷೋತ್ತಮ ಬಿಳಿಮಲೆ., (೧೯೯೦), ಕರಾವಳಿ ಜಾನಪದ, ಮಂಗಳೂರು; ಮಂಗಳೂರು ವಿಶ್ವವಿದ್ಯಾಲಯ, ಮಂಗಳಗಂಗೋತ್ರಿ.

೩೩. ಪುರುಷೋತ್ತಮ ಬಿಳಿಮಲೆ., (೧೯೯೬) ಹಂಪಿ ಜಾನಪದ, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೪. ಪ್ರಭಾಕರ ಎ.ಎಸ್., (೧೯೯೯), ಮ್ಯಾಸಬೇಡರ ಕಥನಗಳು, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೫. ಬಸವರಾಜ ಮಲಶೆಟ್ಟಿ, (೧೯೭೯), ಬಳ್ಳಾರಿ ಜಿಲ್ಲೆಯ ಜನಪದ ಕಥೆಗಳು, ಧಾರವಾಡ; ಕರ್ನಾಟಕ ವಿಶ್ವವಿದ್ಯಾಲಯ.

೩೬. ಬಸವರಾಜ ಮಲಶೆಟ್ಟಿ, (೧೯೮೫), ಬಳ್ಳಾರಿ ಜಿಲ್ಲೆಯ ಜಾನಪದ ಕಥೆಗಳು, ಧಾರವಾಡ; ಕರ್ನಾಟಕ ವಿಶ್ವವಿದ್ಯಾಲಯ.

೩೭. ಮಂಜುನಾಥ ಬೇವಿನಕಟ್ಟಿ., (೧೯೯೪), ಜನಪದ ಸಂಸ್ಕೃತಿ, ಹ್ಯಾರಡ; ತೇಜಸ್ವಿನಿ ಪ್ರಕಾಶನ.

೩೮. ಮಂಜುನಾಥ ಬೇವಿನಕಟ್ಟಿ, (೧೯೯೭), ವಿಜಯನಗರ ಸಾಂಸ್ಕೃತಿಕ ಆಯಾಮಗಳು, ಹೊಸಪೇಟೆ; ಶ್ರೀ ವಿದ್ಯಾ ವಿಜಯನಗರ ಹಂಪಿ ಹೆರಿಟೇಜ್ ಟ್ರಸ್ಟ್.

೩೯. ಮಹಾದೇವ. ಸಿ. ಹಾಗೂ ಇತರರು, (೨೦೦೨), ಹೊಸಪೇಟೆ ತಾಲ್ಲೂಕು ದರ್ಶನ, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೦. ಮಹಾದೇವ. ಸಿ. ಮತ್ತು ಚಿನ್ನಸ್ವಾಮಿಸೋಲೆ (ಸಂ), (೨೦೦೬), ಹಂಪಿ ಅಂದು-ಇಂದು, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೧. ರಾಮಕೃಷ್ಣ.ಕೆ.ಆರ್., (೨೦೦೩), ವಿಜಯನಗರ ಅಧ್ಯಯನ, ಸಂಪುಟ-೯, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೨. ರಾಮಚಂದ್ರ.ಕೆ., (೨೦೧೦), ವಿಸ್ಮಯ ಹಂಪಿ, ಹೊಸಪೇಟೆ; ಸರೂಚಂದ್ರ ಪ್ರಕಾಶನ.

೪೩. ಲಕ್ಕಪ್ಪಗೌಡ. ಎಚ್.ಜೆ., (೧೯೯೭), ಜಾನಪದ ಕೈಪಿಡಿ, ಬೆಂಗಳೂರು; ಕನ್ನಡ ಪುಸ್ತಕ ಪ್ರಾಧಿಕಾರ.

೪೪. ಲಕ್ಷ್ಮಣ್ ತೆಲಗಾವಿ., (ಸಂ), (೨೦೦೩), ಸ್ಥಳೀಯ ಚರಿತ್ರೆ : ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೫. ವಸುಂಧರ ಪಿಲಿಯೋಜಾ., (೧೯೮೨), ಅಳಿದುಳಿದ ಹಂಪೆ, ಬೆಂಗಳೂರು; ಶ್ರೀಗುರುವಿಜಯನಗರ; ಪ್ರೇಮಸಾಯಿ ಪ್ರಕಾಶನ.

೪೬. ವಿವೇಕ ರೈ. ಬಿ.ಎ., (೧೯೯೫), ಅನ್ವಯಿಕ ಜಾನಪದ, ಬೆಂಗಳೂರು; ಕನ್ನಡ ಪುಸ್ತಕ ಅಧಿಕಾರ.

೪೭. ವಿವೇಕ ರೈ. ಬಿ.ಎ., (ಸಂ), (೨೦೦೫), ಪ್ರವಾಸಿ ಕಂಡ ವಿಜಯನಗರ, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೮. ವಿರೂಪಾಕ್ಷಿ ಪೂಜಾರಹಳ್ಳಿ, (೨೦೦೨), ಅಕ್ಕಮ್ಮನ ಆಚರಣೆ, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೯. ಷೇಕ್‌ಅಲಿ.ಬಿ. (ಸಂ), (೧೯೯೭), ಕರ್ನಾಟಕ ಚರಿತ್ರೆ ಸಂಪುಟ-೩, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೦. ಸುಬ್ಬಣ್ಣ ರೈ.ಎ., (೧೯೯೪), ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು, ಮುಂಬೈ; ಮುಂಬೈ ವಿಶ್ವವಿದ್ಯಾಲಯ, ಮಾರೆಜೂನಿಯರ್ ಛೇಂಬರ್, ಮಾಣಿ.

೫೧. ಸುಬ್ಬಣ್ಣ ರೈ.ಎ., (೧೯೯೮), ಗಾಳಿಮ್ಮ, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೨. ಸೋಮಶೇಖರ.ಎಸ್.ವೈ., (೧೯೯೭), ಹಂಪೆಯ ಬಜಾರುಗಳು, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೩. ಹಿರೇಮಠ.ಎಸ್.ಎಸ್., (೧೯೯೪), ಮೈಲಾರನ ಜಾತ್ರೆ, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಆಂಗ್ಲ ಕೃತಿಗಳು

೧. ಅನಿಲಾ ವರ್ಗೀಸ್, (೧೯೯೫), ರಿಲೀಜಸ್ ಟ್ರಡೀಷನ್ಸ್ ಅಟ್ ವಿಜಯನಗರ ಆ್ಯಸ್ ರಿವೀಲ್ಡ್ ಥ್ರೂ ಇಟ್ಸ್ ಮಾನ್ಯೂಮೆಂಟ್ಸ್, ನ್ಯೂಡೆಲ್ಲಿ; ಮನೋಹರ್ ಅಮೇರಿಕನ್ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯನ್ ಸ್ಟಡೀಸ್.

೨. ಅನಿಲಾ ವರ್ಗೀಸ್, (೨೦೦೦), ಆರ್ಕಿಯಾಲಜಿ ಆರ್ಟ್ ಅಂಡ್ ರಿಲೀಜಿಯನ್ : ನ್ಯೂ ಪಾರ್ಸ್‌ಪೆಕ್ಟಿವ್ ಆನ್ ವಿಜಯನಗರ, ನ್ಯೂಡೆಲ್ಲಿ; ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್.

೩. ಅನಿಲಾ ವರ್ಗೀಸ್, (೨೦೦೨), ಹಂಪಿ : ಮಾನ್ಯೂಮೆಂಟಲ್ ಲೆಗಾಸ್ಸಿ, ನ್ಯೂಡೆಲ್ಲಿ; ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್.

೪. ಜಾರ್ಜ್ ಮೈಕೆಲ್, (೧೯೯೨), ದ ವಿಜಯನಗರ ಲೋರ್ಟ್‌ಲಿ ಸ್ಟೈಲ್, ನ್ಯೂಡೆಲ್ಲಿ; ಮನೋಹರ್ ಅಮೇರಿಕನ್ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯನ್ ಸ್ಟಡೀಸ್.

೫. ವೆಂಕಟರಮಣಯ್ಯ.ಎನ್., (೧೯೯೦), ವಿಜಯನಗರ ಆರೀಜನ್ ಆಫ್ ದ ಸಿಟಿ ಅಂಡ್ ದ ಎಂಪೈರ್, ನ್ಯೂಡೆಲ್ಲಿ; ಏಶಿಯನ್ ಎಜ್ಯುಕೇಶನಲ್ ಸರ್ವೀಸ್.

೬. ಸುಂದರ.ಅ., (೧೯೯೭), ಹಂಪಿ ದ ಏನ್ಸಿಯಂಟ್ ಕಿಷ್ಕಿಂಧಾ-ವಾನರಾಸ್ ಕ್ಯಾಪಿಟಲ್, ಹೊಸಪೇಟೆ; ವಿಜಯನಗರ ಹಂಪಿ ಹೆರಿಟೇಜ್ ಟ್ರಸ್ಟ್.

•••

## ಅನುಬಂಧ-೨

## ವಕ್ತೃಗಳ ವಿವರ

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಜಾತಿ | ಊರು |
|---|---|---|---|---|---|
| ೦೧. | ಹೆಚ್. ವಿರೂಪಾಕ್ಷ | ೩೭ | ವ್ಯವಸಾಯ | ಲಿಂಗಾಯತ | ಆನೆಗುಂದಿ |
| ೦೨. | ಹೆಚ್. ಮಂಜುನಾಥ | ೩೮ | ವ್ಯವಸಾಯ | ಲಿಂಗಾಯತ | ಆನೆಗುಂದಿ |
| ೦೩ | ಬ್ರಹ್ಮಾನಂದ ಸ್ವಾಮೀಜಿ | ೩೭ | ದುರ್ಗಾದೇವಿ ಬೆಟ್ಟದ ಮುಖ್ಯಸ್ಥರು | ಬ್ರಾಹ್ಮಣ | ಆನೆಗುಂದಿ (ದುರ್ಗಾದೇವಿ ಬೆಟ್ಟ) |
| ೦೪. | ನಾಗರಾಜಪ್ಪ | ೫೮ | ಪುಸ್ತಕ ವ್ಯಾಪಾರಿ | ಕುರುಬರು | ಆನೆಗುಂದಿ (ದುರ್ಗಾದೇವಿ ಬೆಟ್ಟ) |
| ೦೫. | ನಂದ್ಯಮ್ಮ | ೨೦ | ಕೂಲಿ | ಉಪ್ಪಾರರು | ಕಡೆಬಾಗಿಲು (ಆನೆಗುಂದಿ) |
| ೦೬. | ನಾರಾಯಣಪ್ಪ | ೫೦ | ವ್ಯವಸಾಯ | ಬಳೆಗಾರ | ಕತ್ರಿ (ಆನೆಗುಂದಿ) |
| ೦೭. | ಕುಮಾರ | ೩೨ | ವ್ಯವಸಾಯ | ಲಿಂಗಾಯತ | ವಿರೂಪಾಪುರ ಗಡ್ಡೆ |
| ೦೮. | ರಾಮಚಂದ್ರ | ೩೪ | ವ್ಯವಸಾಯ | ನಾಯಕರು | ಹನುಮನಹಳ್ಳಿ |
| ೦೯. | ಅನಂತಪದ್ಮನಾಭ ಆಚಾರ್ಯ | ೩೨ | ಅರ್ಚಕರು ಮಾಲ್ಯವಂತ ದೇವಸ್ಥಾನ | ಬ್ರಾಹ್ಮಣ | ಉತ್ತರಪ್ರದೇಶ |

| | | | | | |
|---|---|---|---|---|---|
| ೧೦. | ಬಿ. ರಮೇಶ್ ಶ್ರೇಷ್ಠಿ | ೫೭ | ವ್ಯವಸಾಯ | ವೈಶ್ಯ | ಕಾಮಲಾಪುರ |
| ೧೧. | ವಿ. ಖಾದರ್‌ವಲೀ | ೫೮ | ವ್ಯವಸಾಯ | ಮುಸ್ಲಿಂ | ಕಾಮಲಾಪುರ |
| ೧೨. | ಶ್ರೀನಿವಾಸ್ | ೩೫ | ದಿನಗೂಲಿನೌಕರ | ನಾಯಕರು | ಕಾಮಲಾಪುರ |
| ೧೩. | ವೇಣುಗೋಪಾಲ್ | ೩೪ | ದಿನಗೂಲಿನೌಕರ | ಬ್ರಾಹ್ಮಣ | ಕಾಮಲಾಪುರ |
| ೧೪. | ಭರಮಪ್ಪ | ೩೬ | ಪೂಜಾರರು ಪಟ್ಟಣದ ಎಲ್ಲಮ್ಮ ದೇವಸ್ಥಾನ | ಕುರುಬರು | ಕಾಮಲಾಪುರ |
| ೧೫. | ಧನ್‌ರಾಜ್, ಕೆ. ಓಸ್ವಾಲ್ | ೪೦ | ವರ್ತಕರು | ಜೈನ | ಕಾಮಲಾಪುರ |
| ೧೬. | ವಿರೇಶಯ್ಯಸ್ವಾಮಿ | ೬೦ | ಪೂಜಾರರು ಉದ್ಭಾನವೀರಭದ್ರ ದೇವಸ್ಥಾನ | ಜಂಗಮರು | ಕಾಮಲಾಪುರ |
| ೧೭. | ನೀಲಮ್ಮ | ೨೮ | ಕೂಲಿ | ಕುರುಬರು | ಕಾಮಲಾಪುರ |
| ೧೮. | ಮಾರೆಮ್ಮ | ೬೩ | ಕೂಲಿ | ನಾಯಕರು | ಕಾಮಲಾಪುರ |
| ೧೯. | ರುದ್ರಸ್ವಾಮಿ | ೬೪ | ನಿವೃತ್ತಶಿಕ್ಷಕರು | ಜಂಗಮರು | ಕಾಮಲಾಪುರ |
| ೨೦. | ಬಿ. ಕೋದಂಡಪಾಣಿ | ೫೬ | ವ್ಯಾಪಾರಿಗಳು | ವೈಶ್ಯ | ಕಾಮಲಾಪುರ |
| ೨೧. | ಜಂಬಯ್ಯ | ೩೨ | ಕೂಲಿ | ನಾಯಕರು | ನಲ್ಲಾಪುರ |
| ೨೨. | ಚಂದ್ರಾನಾಯಕ್ | ೩೫ | ವ್ಯವಸಾಯ | ಲಂಬಾಣಿ | ಸೀತಾರಾಮ ತಾಂಡ |
| ೨೩. | ಬಸವರಾಜಪ್ಪ | ೪೦ | ವ್ಯವಸಾಯ | ಉಪ್ಪಾರರು | ಬಸವನದುರ್ಗ |
| ೨೪. | ರಾಘವೇಂದ್ರ | ೩೬ | ಕೂಲಿ | ನಾಯಕರು | ಬಸವನದುರ್ಗ |
| ೨೫. | ಚಂದ್ರಶೇಖರ್ | ೪೬ | ವ್ಯವಸಾಯ | ಕುರುಬರು | ನಾಗೇನಹಳ್ಳಿ |
| ೨೬. | ಗಿರಿಯನಾಯಕ್ | ೩೦ | ವ್ಯವಸಾಯ | ಲಂಬಾಣಿ | ಕಡ್ಡಿರಾಂಪುರ |
| ೨೭. | ರಾಮಕೃಷ್ಣ | ೪೨ | ಬಡಗಿ | ವಿಶ್ವಕರ್ಮ | ಹೊಸಪೇಟೆ |
| ೨೮. | ಶ್ರೀನಿವಾಸಮೂರ್ತಿ | ೫೮ | ಶಿಕ್ಷಕರು | ಬ್ರಾಹ್ಮಣ | ಹೊಸಪೇಟೆ |
| ೨೯. | ಮಂಜುನಾಥ | ೩೪ | ಕೂಲಿ | ನಾಯಕರು | ಪ್ರಕಾಶ್‌ನಗರ (ಹಂಪಿ) |

| | | | | | |
|---|---|---|---|---|---|
| ೩೦. | ಸಿದ್ದಮ್ಮ | ೪೫ | ಕೂಲಿ | ಬೋವಿ | ಪ್ರಕಾಶ್‌ನಗರ (ಹಂಪಿ) |
| ೩೧. | ಕೃಷ್ಣಭಟ್ಟ | ೩೩ | ಅರ್ಚಕರು | ಬ್ರಾಹ್ಮಣ | ಹಂಪಿ |
| ೩೨. | ಅನಿಲ್‌ಜೋಷಿ | ೩೬ | ಅರ್ಚಕರು ವಿರೂಪಾಕ್ಷೇಶ್ವರ ದೇವಸ್ಥಾನ | ಬ್ರಾಹ್ಮಣ | ಹಂಪಿ |
| ೩೩. | ಶ್ರೀನಿವಾಸ ಶ್ರೇಷ್ಠಿ | ೫೮ | ವ್ಯಾಪಾರಿ | ವೈಶ್ಯ | ಹಂಪಿ |
| ೩೪. | ಶಿವಯ್ಯಸ್ವಾಮಿ | ೪೪ | ವ್ಯವಸಾಯ | ಲಿಂಗಾಯತ | ಹಂಪಿ |
| ೩೫. | ಕೆಂಚಮ್ಮ | ೫೪ | ಕೂಲಿ | ನಾಯಕರು | ಹಂಪಿ |

•••



ತಳವಾರಪ್ಪನ ಕಲ್ಲು



ತುಲಾಭಾರ



ತೆನಾಲಿ ರಾಮನ ಮಂಟಪ



ಸಾಸಿವೆ ಕಾಳು ಗಣಪತಿ



ಕಡಲೆ ಕಾಳು ಗಣಪತಿ



ಪಟ್ಟಣದ ಯಲ್ಲಮ್ಮ



ಉಗ್ರ ನರಸಿಂಹ(ಲಕ್ಷ್ಮೀ ನರಸಿಂಹ)



ಉದ್ದಾನ ವೀರಭದ್ರ (ಮುದ್ದು ವೀರಣ್ಣ)



ನವವೃಂದಾವನ



ಬಡವಿ ಲಿಂಗ



ಮೂಲ ವಿರೂಪಾಕ್ಷ(ಜೀರದೇವರಗುಡಿ)



ಯಂತ್ರೋದ್ಧಾರಕ ಪ್ರಾಣದೇವರು



ಕೋಟಿಲಿಂಗ(ಕೋತಿಲಿಂಗ)



ಸುಗ್ರೀವ ಗುಹೆ



ಕನ್ನೇರಮ್ಮನ ಭಾವಿ



ಮಾತಂಗ ಪರ್ವತ



ಅಂಜನಾದ್ರಿ ಪರ್ವತ



ಮಾಲ್ಯವಂತ ಪರ್ವತ



ಗಗನ ಮಹಲ್



ಘಟ್ಟಿ ಕೋಟೆ



ಹೇಮಕೂಟ



ವಿರೂಪಾಕ್ಷ ಬಜಾರು



ಅಚ್ಯುತ ಬಜಾರು (ಸೂಳೆ ಬಜಾರು)



ಕೃಷ್ಣ ಬಜಾರು



ಕಾಮಲಾಪುರ ಕೆರೆ ಏರಿ



ಪುಷ್ಕರಣಿ



ಕಾವಲುಗಾರರ ಗೋಪುರ



ಪುರಂದರ ದಾಸರ ಮಂಟಪ



ಗೆಜ್ಜಲು ಮಂಟಪ(ಪರಾಂಕುಶ ಮಂಟಪ)



ರಾಣಿಯರ ಸ್ನಾನ ಗೃಹ



ಕಲ್ಲಿನ ರಥ



ಆನೆಲಾಯ (ಗಜ ಶಾಲೆ)



ಚಿತ್ರಾಂಗಿ ರತ್ನಾಂಗಿ ಮಹಲ್ (ಕಮಲ ಮಹಲ್)



ಮಹಾನವಮಿ ದಿಬ್ಬ



ಅಕ್ಕ-ತಂಗಿಯರ ಗುಂಡು



ಏಡಿ ಗುಡ್ಡ



ಗೋಪುರದಮ್ಮನ ಗೋಪುರ(ವಿರೂಪಾಕ್ಷ ಗೋಪುರ)



ಮನ್ಮಥ ಕುಂಡ(ಮನ್ಮಥ ಹೊಂಡ)



ರತ್ನಕೂಟ



ತಳವಾರ ಘಟ್ಟ



ಹಂಪಿ ಪರಿಸರದ ಕಲ್ಲುರಾಶಿಗಳು



ಸೀತೆ ಸೆರಗು

